# ಧರ್ಮ-ಅಧರ್ಮ



**ಮೋಕ್ಷ**

ನಾಗರ ಹಾವು (ಧರ್ಮ)



**ಸ್ವರ್ಗ**

ಮಳೆಹಾವು (ಅಧರ್ಮ)



**ಮುಂಗಸಿ (ಧರ್ಮ ಶತ್ರು) ನರಕ**


<u>ರಚಿತ :</u> ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**





# ಧರ್ಮ–ಅಧರ್ಮ


<u>ರಚಿತ</u>

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





<u>ಗ್ರಂಥ ಮುದ್ರಣ</u>

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 70/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ–ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

## ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–
    ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : **ಶ್ರೀನಿವಾಸ**–09705864675, **ಲಕ್ಷ್ಮೀನಾರಾಯಣಾಚಾರಿ**–09440556968.
**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ, (ತಾ) ಮಾನವಿ, ರಾಯಚೂರು (ಜಿ)
Cell : 9632418716

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)
Cell : 9611183107, 9164886981

**ಶಿವರಾಜ**
(ಸಾ)(ಕಿ) ಕುಕನೂರು (ಪೊ) ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38, ಬೆಂಗಳೂರು–560085
Cell : 9036982829

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38, ಬೆಂಗಳೂರು–560068
Cell : 08970772028, 07411459912, 07406039453

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ, ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್, ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಧರ್ಮ–ಅಧರ್ಮ



ಒಂದು ಪದಾರ್ಥದ ಸ್ವಭಾವವನ್ನು ತಿಳಿಸುವುದು ಅದರ ಧರ್ಮ ವಾಗುತ್ತದೆ. ಬೇರೆಬೇರೆ ಪದಾರ್ಥಗಳಿಗೆ ಬೇರೆಬೇರೆ ಧರ್ಮಗಳಿರುತ್ತವೆ. ಒಂದು ಪದಾರ್ಥವನ್ನು ನೋಡಿದ ನಂತರ ಅದರ ಧರ್ಮವನ್ನು ತಿಳಿದುಕೊಳ್ಳಬಹುದು. ಒಂದುಬಾರಿ ಒಂದು ಪದಾರ್ಥಕ್ಕಿರುವ ಧರ್ಮವನ್ನು ತಿಳಿದ ನಂತರ ಅದರ ಧರ್ಮವನ್ನು ನೆನಪು ಇಟ್ಟುಕೊಂಡು, ಎಷ್ಟುಕಾಲದ ನಂತರವಾದರು ಅದರ ಧರ್ಮದ ಪ್ರಕಾರ ಆ ಪದಾರ್ಥವನ್ನು ಗುರುತಿಸಬಹುದು. ಒಂದುಬಾರಿ ಒಂದು ವಸ್ತುವಿನ ಧರ್ಮವನ್ನು ತಿಳಿಯದೆ, ನಂತರ ಆ ವಸ್ತುವನ್ನು ಗುರುತಿಸುವುದಕ್ಕೆ ಸಾಧ್ಯವಿರುವುದಿಲ್ಲ. ಒಂದು ಪದಾರ್ಥದಲ್ಲಿ ಶಾಶ್ವತವಾಗಿ ಬದಲಾಗದಂತೆ ಇರುವ ಸ್ವಭಾವವನ್ನು ಧರ್ಮ ಎನ್ನುತ್ತೇವೆ. ಒಂದು ವಸ್ತುವು ಅಥವಾ ಪದಾರ್ಥದಲ್ಲಿ ಶಾಸನವಾಗಿ ಶಾಶ್ವತವಾಗಿರುವ ಸ್ವಭಾವ ಧರ್ಮವಾದಾಗ, ಅಂತಹ ಧರ್ಮ ಶಾಸ್ತ್ರಬದ್ಧವಾದುದೆಂದು ಸಹ ಹೇಳಬಹುದು. ಒಂದು ವಸ್ತುವಿನಲ್ಲಿನ ಧರ್ಮ ಎಂದಿಗೂ ಬದಲಾಗದೆ ಹೀಗೆಯೇ ಇರುತ್ತದೆಂದು ಶಾಸನ ರೂಪವಾಗಿರುವು ದರಿಂದ ಅದನ್ನು ಶಾಸ್ತ್ರೀಯತೆ ಹೊಂದಿರುವುದೆಂದು ಹೇಳಬಹುದು. ಧರ್ಮ ಎಂದಿಗೂ ಬದಲಾಗುವುದಲ್ಲ. ಬದಲಾಗುವುದನ್ನು ಧರ್ಮ ಎನ್ನದಂತೆ ಅಧರ್ಮ ಎನ್ನಬೇಕು. ಯಾವುದಕ್ಕಾದರು ಧರ್ಮ ಅಲ್ಲದಿರುವುದನ್ನು ಅಧರ್ಮ ಎನ್ನುತ್ತೇವೆ. ಒಂದೊಂದು ಪದಾರ್ಥಕ್ಕೆ ಒಂದೊಂದು ಧರ್ಮ ಇರುವಾಗ, ವಿಶ್ವದಲ್ಲಿನ ಎಲ್ಲವುಗಳಿಗೂ ಅವವುಗಳ ಧರ್ಮಗಳು ಬೇರೆ ಬೇರೆಯಾಗಿ ಇವೆಯೆಂದು ತಿಳಿಯುತ್ತದೆ.  ಈ ಪದ್ಧತಿ ಪ್ರಕಾರ ಕಾಣಿಸುವ ಪದಾರ್ಥಗಳಿಗಾಗಲಿ, ವಸ್ತುಗಳಿಗಾಗಲಿ, ಶರೀರಗಳಿಗಾಗಲಿ ಎಲ್ಲವುಗಳಿಗೂ ಎಲ್ಲ ಧರ್ಮಗಳಿವೆ, ಹಾಗೆ ಕಾಣಿಸದವುಗಳಿಗೂ  ಸಹ ಧರ್ಮಗಳಿವೆ. ಕಾಣಿಸುವ ಜೀವರಾಶಿಗಳು ಪದಾರ್ಥಗಳು ಇರುವಂತೆ, ವಿಶ್ವದಲ್ಲಿ ಕಾಣಿಸದಿರುವವು ಕೋಟ್ಯಾದಿ ಕೋಟಿಗಳು ಇವೆ. ಕಾಣಿಸುವವೆಲ್ಲವೂ ನಮಗೆ ತಿಳಿಯದಿದ್ದರು ಅವೆಲ್ಲವನ್ನೂ ಇಲ್ಲವೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಹಾಗೆಯೇ ಕಾಣಿಸದವುಗಳಲ್ಲಿ ಎಲ್ಲದಕ್ಕಿಂತ ದೊಡ್ಡವನು (ಬ್ರಹ್ಮ) ದೇವರು ಒಬ್ಬನು ಮಾತ್ರವೆ. ಎಲ್ಲರಿಗೂ ಎಲ್ಲವುಗಳಿಗೂ ಇರುವಂತೆ ದೇವರಿಗೂ ಸಹ ಧರ್ಮ ಇದೆ.

ಎಲ್ಲರಿಗೂ ಕಾಣಿಸುವ ನಿಂಬೆಹಣ್ಣಿಗೆ ಒಂದು ಧರ್ಮವಿದೆ. ಹಾಗೆಯೇ ಹುಣಿಸೆಹಣ್ಣಿಗೆ ಒಂದು ಧರ್ಮವಿದೆ. ಅವುಗಳಿಗಿರುವ ಶಾಶ್ವತ ಶಾಸನ ಸ್ವಭಾವವನ್ನು ಧರ್ಮ ಎನ್ನುತ್ತೇವೆಂದು ಹೇಳಿಕೊಂಡಿದ್ದೇವಲ್ಲವೆ! ಅದರ ಪ್ರಕಾರ ನಿಂಬೆಹಣ್ಣಿಗೆ ಹುಳಿಯಾಗಿರುವುದು ಧರ್ಮ. ಹಾಗೆಯೇ ಹುಣಿಸೆಹಣ್ಣಿಗೂ ಸಹ ಹುಳಿಯಾಗಿರುವುದೇ ಧರ್ಮ. ಎರಡು ಹಣ್ಣುಗಳೇ ಆದರೂ, ಹುಣಿಸೆಹಣ್ಣಿಗೂ, ನಿಂಬೆಹಣ್ಣಿಗೂ ಹುಳಿಯೇ ಧರ್ಮವಾದರೂ, ನಿಂಬೆಹಣ್ಣು, ಹುಣಿಸೆಹಣ್ಣು ಸ್ವಲ್ಪಮಟ್ಟಿನ ವ್ಯತ್ಯಾಸದಿಂದ ಬೇರೆಬೇರೆಯಾದ ಧರ್ಮಗಳು ಹೊಂದಿವೆ. ಆದ್ದರಿಂದ ಅವುಗಳ ರುಚಿಗಳು ಸಹ ಸ್ವಲ್ಪಮಟ್ಟಿನ ವ್ಯತ್ಯಾಸದಿಂದ ಬೇರೆ ಬೇರೆಯಾಗಿವೆ. ನಿಂಬೆಹಣ್ಣಿಗೆ ಹುಳಿ ಧರ್ಮವಾದಾಗ, ಅದರ ಧರ್ಮವನ್ನು ತಿಳಿದವನು ನಿಂಬೆಹಣ್ಣಿನ ಹುಳಿಯನ್ನು ಕುರಿತು ತಿಳಿದಿರುತ್ತಾನೆ. ವಿಶ್ವದಲ್ಲಿ ಒಂದು ವಸ್ತುವಿನ ಧರ್ಮವು ತಿಳಿದರೆ, ಆ ವಸ್ತುವಿನ ಸ್ವಭಾವವೆಲ್ಲವೂ ತಿಳಿದುಹೋಗುತ್ತದೆ. ಹಾಗೆಯೇ ಒಂದು ವಸ್ತುವಿನ ಸ್ವಭಾವವನ್ನು ತಿಳಿದರೆ, ಅದರ ಧರ್ಮವೂ ಸಹ ತಿಳಿಯುತ್ತದೆ. ಆದರೆ ಉದಾಹರಣೆಗೆ ನಿಂಬೆಹಣ್ಣನ್ನು ನೋಡಿ, ಅದರ ಸ್ವಭಾವವನ್ನು ಪೂರ್ತಿಯಾಗಿ ನೋಡದಂತೆ, ಅದರ ರುಚಿಯನ್ನು ನೋಡದಂತೆ, ನಿಂಬೆಹಣ್ಣು ಕಹಿಯಾಗಿರುತ್ತದೆ ಎಂದುಕೊಳ್ಳುವುದು ಅಧರ್ಮವಾಗುತ್ತದೆ. ಕಹಿ ನಿಂಬೆಹಣ್ಣಿನ ಧರ್ಮವಲ್ಲ. ಆದ್ದರಿಂದ ಕಹಿ ಎನ್ನುವ ಮಾತು ನಿಂಬೆಹಣ್ಣಿನ ಬಗ್ಗೆ ಅಧರ್ಮವಾಗುತ್ತದೆ. ಹಾಗೆಯೇ ನಿಂಬೆಹಣ್ಣನ್ನು ನೋಡದೆಯೆ, ನಿಂಬೆಹಣ್ಣಿನ ಆಕಾರವನ್ನು, ಬಣ್ಣವನ್ನು ನೋಡದೆಯೇ ಕಹಿಯನ್ನು ರುಚಿ ನೋಡಿ, ಇದು ನಿಂಬೆಹಣ್ಣಿನ ರುಚಿ ಎಂದುಕೊಂಡರೂ ಅದು ಅಧರ್ಮವಾಗುತ್ತದೆ. ನಿಂಬೆಹಣ್ಣನ್ನು ನೋಡಿ ಅದಕ್ಕಿರುವ ಧರ್ಮವನ್ನು ತಿಳಿಯುವುದು ಒಂದು ಮಾರ್ಗವಾದರೆ, ಧರ್ಮವನ್ನನುಸರಿಸಿ ನಿಂಬೆಹಣ್ಣನ್ನು ತಿಳಿಯುವುದು ಒಂದು ಮಾರ್ಗವಾಗುತ್ತದೆ. ಕಾಣಿಸುವ ವಸ್ತುವಿನ ಸ್ವಭಾವವಾದ ಧರ್ಮವನ್ನು ಸುಲಭವಾಗಿ ಕಂಡು ಹಿಡಿಯಬಹುದು. ವಸ್ತುವು ತಿಳಿಯದಿರುವಾಗ ಮೊದಲು ನೋಡಿದವರು ತಿಳಿಸಿದ ವಸ್ತುವಿಗಿರುವ ಧರ್ಮವನ್ನನುಸರಿಸಿ ವಸ್ತುವನ್ನು ಗುರುತಿಸಬಹುದು. ಇದನ್ನನುಸರಿಸಿ ನೋಡಿದಾಗ ವಸ್ತುವು ಇಲ್ಲದೆ ಅದರ ಧರ್ಮವನ್ನು ತಿಳಿಯಲಾರೆವು. ಹಾಗೆ ಧರ್ಮವು ತಿಳಿಯದೆ ವಸ್ತುವನ್ನು ತಿಳಿಯಲಾರೆವು.

ಈಗ ಅಸಲು ವಿಷಯಕ್ಕೆ ಬರೋಣ, ಕಾಣಿಸುವ ವಸ್ತುಗಳನ್ನು ನೋಡಿ ಅವುಗಳ ಧರ್ಮಗಳನ್ನು ತಿಳಿಯಬಹುದು. ಹಾಗೆಯೇ ಕಾಣಿಸದ ಸೂಕ್ಷ್ಮ ವಸ್ತುಗಳ ಧರ್ಮಗಳನ್ನನುಸರಿಸಿ ಕಾಣಿಸದಿರುವುದನ್ನು ಗ್ರಹಿಸಬಹುದು. ಕಾಣಿಸುವ ವಸ್ತುಗಳ ಧರ್ಮ ವಿಷಯಗಳಲ್ಲಿ ಯಾರು ತಪ್ಪಾಗಿ ಅರ್ಥೈಯಿಸಿಕೊಳ್ಳುವುದಿಲ್ಲ. ತಿಳಿಯಬೇಕಾದ ವಸ್ತುವು ಕಾಣಿಸುತ್ತಿದೆ, ಆದ್ದರಿಂದ ಅದರ ಧರ್ಮವನ್ನು ತಿಳಿಯುವುದರಲ್ಲಿ ತಪ್ಪಾಗಿ ತಿಳಿಯುವುದಕ್ಕೆ ಅವಕಾಶವೇ ಇಲ್ಲ. ಇನ್ನು ಕಾಣಿಸದಿರುವುದು ಏನಾದರು ತಿಳಿಯಬೇಕೆಂದರೆ ಮೊದಲು ಅದರ ಧರ್ಮ ತಿಳಿದಿರಬೇಕು. ಅದರ ಧರ್ಮವು ತಿಳಿಯದೇ ಹೋದರೆ ಕಾಣಿಸದಿರುವುದೇ ನಾದರೂ ತಿಳಿಯುವುದಿಲ್ಲ. ಒಂದು ವೇಳೆ ಕಾಣಿಸದ ಬಿಳಿಯ ವಸ್ತುವಿನ ಧರ್ಮವು ತಿಳಿಯದೆ, ಕಾಣಿಸದ ಬೇರೊಂದು ಕಪ್ಪನೆಯ ವಸ್ತುವಿನ ಧರ್ಮವನ್ನು ತಿಳಿದು, ಬಿಳಿಯ ವಸ್ತುವನ್ನು ಕಪ್ಪನೆಯ ವಸ್ತುವಿಗೆ ಹೋಲಿಸಿಕೊಂಡರೆ ಬಿಳಿಯ ವಸ್ತುವು ತಿಳಿಯದಂತೆ ಅಲ್ಲವೆ! ಆದ್ದರಿಂದ ಒಂದು ವಸ್ತುವೊಂದರ ಧರ್ಮವನ್ನು ಮತ್ತೊಂದು ವಸ್ತುವೊಂದರ ಧರ್ಮವನ್ನು ಇಟ್ಟುಕೊಂಡರೆ ಅದು ಮೊದಲ ವಸ್ತುವಿಗೆ ಅಧರ್ಮವಾಗುತ್ತದೆ. ಅಧರ್ಮದಿಂದ ಮೊದಲ ವಸ್ತುವಿನ ರೂಪು ರೇಖೆಗಳು ಸ್ವಲ್ಪವೂ ಸಹ ತಿಳಿಯದಂತೆ ಹೋಗುತ್ತವೆ. ಕಾಣಿಸುವಂತಹ ವಿಷಯಗಳಿಗಿಂತ ಕಾಣಿಸದಂತಹ ವಿಷಯಗಳಲ್ಲಿ ನಮಗೆ ತಿಳಿದಿರುವವು ಧರ್ಮಗಳೋ, ಅಧರ್ಮಗಳೋ ಜಾಗ್ರತೆಯಾಗಿ ಪರಿಶೀಲಿಸಬೇಕಾದ ಅವಶ್ಯಕತೆ ಇದೆ. ಹಾಗೆ ಪರಿಶೀಲಿಸದೆ ಧರ್ಮಗಳ ಸ್ಥಾನದಲ್ಲಿ ಅಧರ್ಮಗಳನ್ನು ಇಟ್ಟುಕೊಂಡರೆ ತಿಳಿಯಬೇಕಾಗಿರುವವು ತಿಳಿಯದಂತೆ ಹೋಗುತ್ತವೆ.

ವಿಶ್ವದಲ್ಲಿ ಕಾಣಿಸದಿರುವವು ಎಷ್ಟೋ ಕೋಟಿಗಳು ಇವೆ. ಅವುಗಳೆಲ್ಲವು ಗಳಲ್ಲಿ ಅತಿ ದೊಡ್ಡದನ್ನು ಪರಮಾತ್ಮ ಅಥವಾ ದೇವರು ಎನ್ನಬಹುದು. ದೇವರು ಕಾಣಿಸುವವನು ಅಲ್ಲ. ಆದ್ದರಿಂದ ದೇವರನ್ನು ಕುರಿತು ತಿಳಿಯಬೇಕೆಂದರೆ ದೇವರ ಧರ್ಮಗಳನ್ನು ಆಧಾರ ಮಾಡಿಕೊಂಡು ದೇವರನ್ನು ತಿಳಿಯಬಹುದು. ಯಾವ ಧರ್ಮವನ್ನನುಸರಿಸಿ ಅದನ್ನು ತಿಳಿಯಬಹುದು ಎಂಬ ಸೂತ್ರದ

ಪ್ರಕಾರ, ದೇವರ ಧರ್ಮಗಳನ್ನನುಸರಿಸಿ ದೇವರು ಹೇಗಿದ್ದಾನೋ, ಆತನು ಏನು ಕೆಲಸ ಮಾಡುತ್ತಿದ್ದಾನೋ, ಆತನು ಎಲ್ಲಿ ನಿವಾಸಿಸುತ್ತಿದ್ದಾನೋ ತಿಳಿಯಬಹುದು. ಆದರೆ ಪ್ರಪಂಚದಲ್ಲಿನ ಎಲ್ಲರೂ ದೇವರನ್ನು ತಿಳಿಯಬೇಕೆಂದು ಇದ್ದರೂ, ಅವರಲ್ಲಿ ಹೆಚ್ಚಾಗಿ ಪ್ರಯತ್ನ ಮಾಡುವವರು ಸ್ವಾಮೀಜಿಗಳು, ಪೀಠಾಧಿಪತಿಗಳು, ಮಠಾಧಿಪತಿಗಳು, ಮಹರ್ಷಿಗಳು, ಉಪಾಸಕರು ಮೊದಲಾದವರು. ಆದರೇ ದೇವರನ್ನು ತಿಳಿಯುವುದಕ್ಕೆ ದೇವರ ಧರ್ಮವು ಅಗತ್ಯವೆಂದು ಎಲ್ಲರಿಗೂ ತಿಳಿದರೂ, ದೇವರ ಧರ್ಮವೇನೋ ಯಾರಿಗೂ ತಿಳಿದಿಲ್ಲ. ಭೂಮಿಮೇಲೆ ಎಷ್ಟೋಜನ ಜ್ಞಾನ ತಿಳಿದವರಿದ್ದರೂ, ತಮ್ಮ ಜ್ಞಾನ ಯಾವುದಕ್ಕೆ ಸಂಬಂದಿಸಿರುವುದೊ ಅವರಿಗೆ ತಿಳಿಯುತ್ತಿಲ್ಲ. ಜ್ಞಾನ ತಿಳಿದ ಪ್ರತಿಯೊಬ್ಬರೂ, ತಮ್ಮ ಜ್ಞಾನ ದೇವರಿಗೆ ಸಂಬಂಧಿಸಿರುವುದೇ ಎಂದು ಕೊಳ್ಳುತ್ತಿದ್ದಾರೆ. ಅದ್ವೈತರು, ದ್ವೈತರು, ವಿಶಿಷ್ಟಾದ್ವೈತರು ತಮ್ಮ ತಮ್ಮ ಜ್ಞಾನಗಳು ದೊಡ್ಡವೆಂದು ಒಬ್ಬರಿಗೊಬ್ಬರು ವಾದಿಸಿಕೊಳ್ಳುತ್ತಿದ್ದಾರೆ. ಇವರೆ ಅಲ್ಲದೆ ಉಳಿದವರು ಕೆಲವರು ಯಜ್ಞಗಳು ದೊಡ್ಡವೆಂದು, ಅವುಗಳ ಮೂಲಕವೇ ದೇವರ ಹತ್ತಿರಕ್ಕೆ ಹೋಗಬಹುದೆಂದು ಹೇಳಿದಾಗ, ಕೆಲವರು ಸ್ವಾಮೀಜಿಗಳು ವೇದಗಳು ಉತ್ತಮವಾದವೆಂದು, ವೇದಗಳಿಂದಲೇ ದೇವರು ತಿಳಿಯುತ್ತಾನೆಂದು ಹೇಳುತ್ತಿದ್ದಾರೆ. ಕೆಲವರು ಧ್ಯಾನವೆನ್ನುತ್ತಿದ್ದಾರೆ, ಕೆಲವರು ಶ್ವಾಸದ ಮೇಲೆ ಧ್ಯಾಸ ಎನ್ನುತ್ತಿದ್ದಾರೆ, ಕೆಲವರು ಮನಸ್ಸಿನ ಮೇಲೆ ಧ್ಯಾಸ ಎನ್ನುತ್ತಿದ್ದಾರೆ. ವಾಸ್ತವಕ್ಕೆ ಇವುಗಳ ಮೂಲಕ ದೇವರು ತಿಳಿಯುತ್ತಾನಾ? ಎಂದು ಪ್ರಶ್ನಿಸಿಕೊಂಡು ನೋಡಿದರೆ, ಯಾರವು ದೇವರ ಧರ್ಮಗಳಾದರೆ ಅವರಿಗೆ ದೇವರು ತಿಳಿಯುತ್ತಾನೆಂದು ಹೇಳಬಹುದು.

ಇಷ್ಟುಜನ ಜ್ಞಾನಿಗಳಲ್ಲಿ ಒಬ್ಬರ ಜ್ಞಾನದಿಂದ ಮತ್ತೊಬ್ಬರ ಜ್ಞಾನವನ್ನು ಏಕೀಭವಿಸದಿರುವಾಗ, ಯಾರದೋ ಒಬ್ಬರದ್ದು ಸರಿಯಾದ ಜ್ಞಾನವಾದರೆ ಉಳಿದವರದು ಸರಿಯಾದ ಜ್ಞಾನ ಅಲ್ಲವೆಂದೇ ಅರ್ಥ. ದೇವರ ಧರ್ಮ, ಜ್ಞಾನದ ಮೂಲಕವೇ ತಿಳಿಯುತ್ತದೆ. ಜ್ಞಾನವು ದೃಷ್ಠಿ ಇದ್ದಂತೆ, ಧರ್ಮವು

ದೃಶ್ಯ ಇದ್ದಂತೆ. ಯಾವ ಧರ್ಮವಾದರು ಜ್ಞಾನದ ಮೂಲಕವೇ ತಿಳಿಯುತ್ತದೆ. ದೃಷ್ಠಿಯನ್ನನುಸರಿಸಿ ದೃಶ್ಯವಿರುವಂತೆ ಜ್ಞಾನವನ್ನನುಸರಿಸಿ ಧರ್ಮವಿರುತ್ತದೆ. ದೇವರ ಜ್ಞಾನದ ಮೂಲಕ ಮಾತ್ರವೇ ದೇವರ ಧರ್ಮವು ತಿಳಿಯುತ್ತದೆ. ದೇಶದಲ್ಲಿನ ಇಷ್ಟುಜನ ಜ್ಞಾನಿಗಳಲ್ಲಿ, ಸ್ವಾಮೀಜಿಗಳಲ್ಲಿ, ಪೀಠಾಧಿಪತಿಗಳಲ್ಲಿ ಒಟ್ಟು ಎಲ್ಲರಲ್ಲಿಯೂ ಯಾರದು ನಿಜವಾದ ದೇವರ ಜ್ಞಾನ ಎನ್ನುವ ಪ್ರಶ್ನೆ ಬಂದರೆ, ಅದಕ್ಕೆ ಭಗವದ್ಗೀತೆಯಲ್ಲಿ ದೇವರೇ ಸಮಾಧಾನ ಹೀಗೆ ಹೇಳಿದ್ದಾನೆ **"ಯಜ್ಞಗಳಿಂದ, ವೇದಾಧ್ಯಾಯನಗಳಿಂದ, ದಾನಗಳಿಂದ, ತಪಸ್ಸುಗಳಿಂದ ನನ್ನನ್ನು ತಿಳಿಯುವುದಕ್ಕೆ ಶಕ್ಯವು ಅಲ್ಲ."** ಎಂದು ದೇವರೆ ಹೇಳಿದಾಗ, ಒಟ್ಟಾರೆ ಎಲ್ಲರ ಜ್ಞಾನವು ದೇವರಿಗೆ ಸಂಬಂಧಿಸಿರುವುದು ಅಲ್ಲವೆಂದು ತಿಳಿಯುತ್ತದೆ. ಎಲ್ಲ ವಿಧದ ಸ್ವಾಮೀಜಿಗಳು ಭಗವದ್ಗೀತೆಯಲ್ಲಿ ಭಗವಂತನು ಹೇಳಿದಂತೆ ಕೆಲವರು ಯಜ್ಞಗಳನ್ನು, ಕೆಲವರು ವೇದಗಳನ್ನು, ಕೆಲವರು ದಾನಗಳನ್ನು, ಕೆಲವರು ಧ್ಯಾನಗಳನ್ನು ಆಶ್ರಯಿಸಿರುವುದರಿಂದ, ಅವು ಎಲ್ಲವೂ ದೇವರ ಜ್ಞಾನ ಅಲ್ಲದಿರುವುದರಿಂದ, ಅವರ ಜ್ಞಾನದಿಂದ ದೇವರ ಧರ್ಮ ತಿಳಿಯುವುದಿಲ್ಲ. ಯಜ್ಞಗಳ, ವೇದಗಳ, ದಾನಗಳ, ಧ್ಯಾನಗಳ ಜ್ಞಾನವು ದೇವರಿಗೆ ಅಧರ್ಮವಾಗುತ್ತದೆ. ಅಧರ್ಮದಿಂದ ದೇವರು ತಿಳಿಯುವುದಿಲ್ಲ. ದೇವರ ಧರ್ಮದಿಂದ ಮಾತ್ರವೇ ದೇವರು ತಿಳಿಯುತ್ತಾನೆ.

ಕಾಣಿಸದ ದೇವರು ತಿಳಿಯಬೇಕೆಂದರೆ ಆತನ ಧರ್ಮವು ಮೊದಲು ತಿಳಿದಿರಬೇಕು. ಅಂತದರಲ್ಲಿ ಆತನ ಧರ್ಮಗಳು ಯಾರಿಗೆ ತಿಳಿದಿದೆ ಎಂದು ಪ್ರಶ್ನಿಸಿಕೊಂಡರೆ, ದೇವರ ಧರ್ಮಗಳು ದೇವರಿಗೇ ತಿಳಿದಿರುತ್ತವೆ. ಇತರರಿಗ್ಯಾರಿಗೂ ತಿಳಿಯುವುದಿಲ್ಲ. ದೇವರ ಧರ್ಮಗಳನ್ನು ದೇವರೇ ಹೇಳಬೇಕು, ದೇವರು ಹೊರತು ಯಾರು ಹೇಳಲಾರರು ಎಂದು ಹೇಳಬಹುದು. ದೇವರ ಧರ್ಮಗಳನ್ನು ದೇವರು ಒಂದುಬಾರಿ ಮನುಷ್ಯರಿಗೆ ಹೇಳಿದರೂ, ಸ್ವಲ್ಪ ಕಾಲಕ್ಕೆ ಪುನಃ ಅವು ಅಧರ್ಮಗಳಾಗಿ ಬದಲಾಗುತ್ತವೆ. ಒಂದುಬಾರಿ ಹೇಳಿದಾಗ ಕೇಳಿಸಿಕೊಂಡ ಮನುಷ್ಯರು ಕಾಲಕ್ರಮದಲ್ಲಿ ಜನನ ಮರಣಗಳನ್ನು ಪಡೆಯುವುದರಿಂದ, ದೇವರ

ಜ್ಞಾನದ ಮೇಲೆ ಶ್ರದ್ಧಾರಾಹಿತ್ಯದಿಂದ, ತಿಳಿದ ಧರ್ಮಗಳೂ ಸಹ ತಿಳಿಯದಂತೆ ಹೋಗಿ ಅವುಗಳ ಸ್ಥಾನದಲ್ಲಿ ಅಧರ್ಮಗಳು ಬಂದು ಸೇರುತ್ತವೆ. ದೇವರ ಧರ್ಮಗಳನ್ನು ದೇವರೇ ಹೇಳಬೇಕೆಂದು ಮೂರು ಮತಗ್ರಂಥಗಳಲ್ಲಿಯೂ ಇದೆ. ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ 7,8ನೇ ಶ್ಲೋಕಗಳಲ್ಲಿಯೂ, ಬೈಬಲ್ ಗ್ರಂಥದಲ್ಲಿ ಯೋಹಾನ್ ಸುವಾರ್ತೆಯಲ್ಲಿ 16ನೇ ಅಧ್ಯಾಯದಲ್ಲಿ 12, 13ನೇ ವಾಕ್ಯಗಳಲ್ಲಿಯೂ, ನಂತರ ಖುರಾನ್ ಗ್ರಂಥದಲ್ಲಿ ಮೂರನೆ ಸುರಾ "ಅಲೀ ಇಮ್ರಾನ್" ನಲ್ಲಿ 7ನೇ ಆಯತ್‌ನಲ್ಲಿ ಈ ವಿಷಯವು ಹೇಳಲಾಗಿದೆ. ಮೂರು ಮೂಲ ಗ್ರಂಥಗಳಲ್ಲಿಯೂ ದೇವರ ಧರ್ಮಗಳನ್ನು ದೇವರೇ ಹೇಳಬೇಕೆಂದು ಇದೆ. ಇತರ ಮನುಷ್ಯರು ದೇವರನ್ನು ನೋಡಿದವರು ಯಾರೂ ಇಲ್ಲವಾದ್ದರಿಂದ ಯಾವ ಮನುಷ್ಯ ಹೇಳುವುದಕ್ಕೂ ಸಾಧ್ಯವಿಲ್ಲ. "ಇದಕ್ಕೂ ಮೊದಲು ದೇವರು ತನ್ನ ಧರ್ಮಗಳನ್ನು ಹೇಳಿರುವಾಗ ಒಬ್ಬ ಮನುಷ್ಯನಾದ ದೇವರು ತಿಳಿಸಿದ ಧರ್ಮಗಳ ಪ್ರಕಾರ ದೇವರನ್ನು ತಿಳಿದಿರುತ್ತಾನೆ ಅಲ್ಲವೆ! ಅಂತಹ ಮನುಷ್ಯ ದೇವರ ಧರ್ಮಗಳನ್ನು ಹೇಳಬಹುದು ಅಲ್ಲವೆ!" ಎಂದು ಯಾರಾದರೂ ಪ್ರಶ್ನೆ ಕೇಳಬಹುದು. ಅದಕ್ಕೆ ಉತ್ತರ ಈ ವಿಧವಾಗಿ ಇದೆ. ದೇವರು ತನ್ನ ಧರ್ಮಗಳನ್ನು ಇದಕ್ಕೂ ಮೊದಲಿನ ಯುಗಗಳಲ್ಲಿ ಹೇಳಿದಾಗ, ಆಗ ತಿಳಿಸಲಾದ ಧರ್ಮಗಳನ್ನು ಅನುಸರಿಸಿ ದೇವರನ್ನು ತಿಳಿದುಕೊಂಡಿದ್ದಾರೆ. ಯಾವ ಮಾನವನಾದರು ಒಂದುಬಾರಿ ದೇವರನ್ನು ತಿಳಿದುಕೊಂಡರೆ ಆತನ ಕರ್ಮಗಳೆಲ್ಲವೂ ಸುಟ್ಟುಹೋಗಿ ಆತನು ದೇವರಲ್ಲಿ ಐಕ್ಯವಾಗಿಹೋಗುತ್ತಾನೆ. ಅಂತಹವರು ಮತ್ತೆ ಹುಟ್ಟುವುದಿಲ್ಲ. ಆದ್ದರಿಂದ ದೇವರನ್ನು ತಿಳಿದವನು ಭೂಮಿಮೇಲೆ ಯಾರೂ ಇರುವುದಿಲ್ಲ. ಒಂದುಬಾರಿ ದೇವರ ಧರ್ಮಗಳನ್ನು ತಿಳಿದಾಗ, ಧರ್ಮಗಳನ್ನು ಅನುಸರಿಸಿ ಕೆಲವರು ಮೋಕ್ಷವನ್ನು ಪಡೆದರೆ, ಧರ್ಮಗಳನ್ನು ಅರ್ಥ ಮಾಡಿಕೊಳ್ಳದವರು, ದೇವರ ಜ್ಞಾನದ ಮೇಲೆ ಶ್ರದ್ಧೆ ಇಲ್ಲದವರು, ಸ್ವಲ್ಪ ಕಾಲಕ್ಕೆ ದೇವರ ವಿಷಯದಲ್ಲಿ ಅಧರ್ಮಗಳನ್ನು ಆಶ್ರಯಿಸುತ್ತಾರೆ. ಆಗ ಧರ್ಮಗಳ ಸ್ಥಾನದಲ್ಲಿ ಅಧರ್ಮಗಳು

ಇರುವುದರಿಂದ ದೇವರು ಸರಿಯಾದ ಪದ್ಧತಿಯಾಗಿ ಅರ್ಥವಾಗುವುದಿಲ್ಲ. ದೇವರನ್ನು ಅಧರ್ಮಗಳ ಪ್ರಕಾರ ಲೆಕ್ಕಿಸಿಕೊಂಡು ದೇವರನ್ನು ಸಹ ಒಂದು ದೇವತೆಯಾಗಿ ಲೆಕ್ಕಿಸಿಕೊಳ್ಳುತ್ತಾರೆ. ಅಂತಹ ಸಮಯದಲ್ಲಿ ಅಧರ್ಮಗಳು ಪೂರ್ತಿಯಾಗಿ ವ್ಯಾಪಿಸಿದಾಗ ದೇವರು ತನ್ನ ಧರ್ಮಗಳನ್ನು ಮತ್ತೆ ತಿಳಿಸಬೇಕಾಗಿ ಬರುತ್ತದೆ.

ನಮಗೆ ತಿಳಿದ ದ್ವಾಪರಯುಗ ಕೊನೆಯಲ್ಲಿ ದೇವರು ಭಗವಂತನಾಗಿ ಅವತರಿಸಿ ಭಗವದ್ಗೀತೆ ರೂಪದಲ್ಲಿ ತನ್ನ ಧರ್ಮಗಳನ್ನು ತಿಳಿಸಿದ್ದಾನೆ. ದೇವರ ಧರ್ಮಗಳು ತಿಳಿದಾಗ, ಅಧರ್ಮಗಳು ಸ್ಪಷ್ಟವಾಗಿ ಹೊರಬೀಳುತ್ತವೆ. ಇವು ಅಧರ್ಮಗಳೆಂದು ಪ್ರತ್ಯೇಕಿಸಿ ಹೇಳದೆ ಹೋದರೂ, ಧರ್ಮಗಳು ತಿಳಿದರೆ ಅಧರ್ಮಗಳು ಇವು ಎಂದು ಹೇಳದೆಯೇ ತಿಳಿದುಹೋಗುತ್ತದೆ. ಭಗವದ್ಗೀತೆಯಲ್ಲಿ ಅಕ್ಷರ ಪರಬ್ರಹ್ಮಯೋಗದಲ್ಲಿ ಕೊನೆಯಲ್ಲಿರುವ 28ನೇ ಶ್ಲೋಕವು...

**ಶ್ಲೋ॥** ***ವೇದೇಷು ಯಜ್ಞೇಷು ತಪಸ್ಸುಚೈವ ದಾನೇಷು ಯತ್ಪುಣ್ಯಫಲಂಪ್ರದಿಷ್ಟಮ್।***
***ಅತ್ಯೇತಿ ತತ್ಸರ್ವಮಿದಂ ವಿದಿತ್ವಾ ಯೋಗೀ ಪರಂ ಸ್ಥಾನಮುಪೈತಿಚಾದ್ಯಮ್॥***

**ಭಾವಾರ್ಥ :–** ಇದನ್ನು ತಿಳಿದವನು ವೇದಗಳನ್ನು, ಯಜ್ಞಗಳನ್ನು, ದಾನಗಳನ್ನು, ತಪಸ್ಸುಗಳನ್ನು ಆಚರಿಸುವುದರಿಂದ ಬರುವ ಪುಣ್ಯಫಲಗಳನ್ನು ಅತಿಕ್ರಮಿಸಿ ದವನಾಗಿ ಒಳ್ಳೆಯ ಜ್ಞಾನಹೊಂದಿ ಪರಮ ಎನ್ನುವ ಮೋಕ್ಷವನ್ನು ಪಡೆಯುತ್ತಾನೆ.

ವಿಶ್ವರೂಪ ಸಂದರ್ಶನ ಯೋಗ :– 48ನೇ ಶ್ಲೋಕ...

**ಶ್ಲೋ॥** ***ನವೇದ ಯಜ್ಞಾಧ್ಯಯನೈರ್ನ ದಾನೈರ್ನ ಚಕ್ರಿಯಾಭಿರ್ನತಪೋ ಭಿರುಗ್ರೈಃ।***
***ಏವರೂಪ ಶ್ಯಕ್ಯ ಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ ಕುರುಪ್ರವೀರ॥***

**ಭಾವಾರ್ಥ :–** ಓ ಅರ್ಜುನಾ! ಭೂಮಿಮೇಲೆ ನೀನು ಹೊರತು, ನನ್ನ ಈ ರೂಪವನ್ನು ಯಾರೂ ನೋಡಲಿಲ್ಲ. ವೇದಗಳಿಂದ, ಯಜ್ಞಗಳಿಂದ, ದಾನಗಳಿಂದ, ದೊಡ್ಡ ತಪಸ್ಸುಗಳಿಂದ ನನ್ನನ್ನು ನೋಡುವುದಕ್ಕೆ ಸಾಧ್ಯವಾಗುವುದಿಲ್ಲ.

ವಿಶ್ವರೂಪಸಂದರ್ಶನ ಯೋಗ :– 53ನೇ ಶ್ಲೋಕ...

**ಶ್ಲೋ॥ *ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ।***
***ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾ ನಸಿ ಮಾಂ ಯಥಾ॥***

**ಭಾವಾರ್ಥ :–** ವೇದಗಳಿಂದಾಗಲಿ, ತಪಸ್ಸು (ಧ್ಯಾನ) ಗಳಿಂದಾಗಲಿ, ದಾನಗಳಿಂದಾಗಲಿ, ಯಜ್ಞಗಳಿಂದಾಗಲಿ ಈಗ ನೀನು ನೋಡಿದ ನನ್ನ ರೂಪವನ್ನು ನೋಡುವುದಕ್ಕೆ ಶಕ್ಯ(ಸಾಧ್ಯ)ವಾಗುವುದಿಲ್ಲ.

ಭಗವದ್ಗೀತೆಯಲ್ಲಿ ವಿಶ್ವರೂಪಸಂದರ್ಶನ ಯೋಗ ಎನ್ನುವ ಅಧ್ಯಾಯಕ್ಕಿಂತ ಮೂರು ಅಧ್ಯಾಯಗಳ ಮುಂದಿರುವ ಅಕ್ಷರ ಪರಬ್ರಹ್ಮಯೋಗವೆಂಬ 28ನೇ ಕೊನೆಯ ಶ್ಲೋಕದಲ್ಲಿಯೇ ಭಗವಂತನಾದ ಶ್ರೀಕೃಷ್ಣನು "ಯಾವ ಮಾನವನಾದರು ಧರ್ಮಗಳನ್ನು ತಿಳಿದಾಗ, ಅಧರ್ಮಗಳಿಂದ ಬರುವ ಜನನ ಫಲಿತವನ್ನು ಅತಿಕ್ರಮಿಸಿ ಜನ್ಮರಾಹಿತ್ಯ ಮೋಕ್ಷವನ್ನು ಪಡೆಯಬಹುದೆಂದು ಹೇಳಿದ್ದಾರೆ" ನಂತರ ವಿಶ್ವರೂಪಸಂದರ್ಶನ ಯೋಗವೆಂಬ ಅಧ್ಯಾಯದಲ್ಲಿ 48ನೇ ಶ್ಲೋಕದಲ್ಲಿ ಭಗವಂತನು ಅಲ್ಲದೆ ಪ್ರತ್ಯಕ್ಷವಾಗಿ ಸ್ವತಃ ದೇವರೇ ಹೇಳಿದ ಮಾತುಗಳ ಪ್ರಕಾರ ಅಧರ್ಮಗಳಾದ ನಾಲ್ಕು ಕ್ರಿಯೆಗಳಿಂದ ದೇವರು ತಿಳಿಯುವುದಿಲ್ಲವೆಂದು, ಆ ಅಧರ್ಮ ಕಾರ್ಯಗಳನ್ನು ಮಾಡುವುದರಿಂದ ದೇವರನ್ನು ತಿಳಿಯುವುದಕ್ಕೆ ಸಾಧ್ಯವಾಗುವುದಿಲ್ಲವೆಂದು ತಿಳಿಯಲಾಗಿದೆ. ನಂತರ ಅದೇ ಅಧ್ಯಾಯದಲ್ಲಿ ದೇವರು ಅಲ್ಲದೆ ಭಗವಂತನಾದ ಕೃಷ್ಣನು ಹೇಳಿದ 53ನೇ ಶ್ಲೋಕದಲ್ಲಿಯೂ ಸಹ ದೇವರ ಧರ್ಮಗಳೆಂದು ಭ್ರಮಿಸಿ ಎಲ್ಲರೂ ಮಾಡುವ ನಾಲ್ಕು ಆಚರಣೆಗಳಿಂದ ದೇವರನ್ನು ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲವೆಂದು ಹೇಳಲಾಗಿದೆ. ಅಕ್ಷರ ಪರಬ್ರಹ್ಮಯೋಗವೆಂಬ ಅಧ್ಯಾಯದಲ್ಲಿ 28ನೇ ಶ್ಲೋಕದಲ್ಲಿ, ನಂತರ ವಿಶ್ವರೂಪಸಂದರ್ಶನ ಯೋಗದಲ್ಲಿ 48ನೇ ಶ್ಲೋಕದಲ್ಲಿ ಮತ್ತು 53ನೇ ಶ್ಲೋಕದಲ್ಲಿ ಅಧರ್ಮಗಳ ಹೆಸರುಗಳನ್ನು, ಅವುಗಳ ಆಚರಣೆಗಳನ್ನು ತಿಳಿಸಿದ್ದಾನೆ. ಭಗವದ್ಗೀತೆಯಲ್ಲಿ ಕೃಷ್ಣನು ಹೇಳಿದ

ಮಾತುಗಳನ್ನು ಏಕೆ ಕೇಳಬೇಕು? ಆತನು ಸಹ ಸಾಧಾರಣ ಮನುಷ್ಯನೇ ತಾನೆ! ಎಂದು ಯಾರಾದರೂ ಅಂದುಕೊಳ್ಳುವುದಕ್ಕೆ ಅವಕಾಶವಿಲ್ಲದಂತೆ, ಜ್ಞಾನಯೋಗ ಎನ್ನುವ ಅಧ್ಯಾಯದಲ್ಲಿ ಅರ್ಜುನನು ಕೇಳಿದ ಇಂತಹ ಪ್ರಶ್ನೆಗೆ ಕೃಷ್ಣನು ಉತ್ತರ ಹೇಳುತ್ತಾ ಹೀಗೆ ಹೇಳಿದ್ದಾನೆ.

***ಶ್ಲೋಕ :– 5*** ***ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ।***
***ತಾನ್ಯಹಂ ವೇದ ಸರ್ವಾಣಿ ನತ್ವಂ ವೇತ್ಥ ಪರಂತಪ॥***

***ಶ್ಲೋಕ :– 6*** ***ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್।***
***ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮ ಮಾಯಯಾ॥***

***ಶ್ಲೋಕ :– 7*** ***ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ।***
***ಅಭ್ಯುತ್ಥಾನ ಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್॥***

***ಶ್ಲೋಕ :– 8*** ***ಪವಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಮ್।***
***ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ॥***

ದ್ವಾಪರಯುಗದ ಕೊನೆಯಲ್ಲಿ ದೇವರು ಭಗವಂತನಾಗಿ ಹುಟ್ಟಿದ್ದಾನೆ. ದೇವರು ದೇವರಾಗಿ ಹುಟ್ಟುವುದಕ್ಕೆ ಸಾಧ್ಯವಿಲ್ಲ, ಆದ್ದರಿಂದ ದೇವರು ಒಬ್ಬ ಮನುಷ್ಯನಂತೆ ಜನ್ಮಿಸುತ್ತಾನೆ. ಅಂತಹ ಜನ್ಮವನ್ನು ಭಗವಂತನು ಎನ್ನುತ್ತೇವೆ. ಮೇಲಿರುವ ಐದು ಶ್ಲೋಕಗಳಿಂದ ದೇವರು ಭಗವಂತನಾಗಿ ಗತದಲ್ಲಿಯೂ ಸಹ ಹುಟ್ಟಿದ್ದಾನೆಂದು, ನಾವು ಎಷ್ಟುಬಾರಿ ಹುಟ್ಟಿರುವುದು ನಮಗೆ ಜ್ಞಾಪಕ ಇಲ್ಲದಿದ್ದರೂ, ಆತನ ಜನ್ಮಗಳು ಮಾತ್ರ ಆತನಿಗೆ ಎಲ್ಲ ತಿಳಿದಿದೆ ಎಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ ಆರನೇ ಶ್ಲೋಕದಲ್ಲಿ ಸಕಲ ಜೀವರಾಶಿಗಳಿಗೂ ಈಶ್ವರನಾದ ನಾನು, ಸಾವು ಹುಟ್ಟುಗಳು ಸಹ ಇಲ್ಲದ ನಾನು, ನನ್ನ ಪ್ರಕೃತಿಯನ್ನು ಸ್ವಾದೀನಪಡಿಸಿ ಶರೀರದಿಂದ ಮಾಯೆಯನ್ನು ಕೂಡಿ ಹುಟ್ಟುತ್ತಿದ್ದೇನೆ ಎಂದು ಹೇಳಿದ್ದಾನೆ. ಇನ್ನು ಏಳನೇ ಶ್ಲೋಕದಲ್ಲಿ ಯಾವಾಗಾದರೆ ಧರ್ಮಗಳು ಮನುಷ್ಯನಿಗೆ ತಿಳಿಯದಂತೆಹೋಗಿ, ಇವೇ ಧರ್ಮಗಳೆಂದು ಭ್ರಮೆಯಿಂದ

ಅಧರ್ಮಗಳಲ್ಲಿ ಸಿಕ್ಕಿಕೊಳ್ಳುತ್ತಾನೊ, ಆಗ ತಪ್ಪದೆ ನಾನು ಹುಟ್ಟುತ್ತಿದ್ದೇನೆ ಎಂದು ಹೇಳಿದ್ದಾನೆ. ಆತನು ಹುಟ್ಟಿ ಏನು ಮಾಡುತ್ತಾನೆ? ಎನ್ನುವ ಪ್ರಶ್ನೆಗೆ ಸಮಾಧಾನ ವಾಗಿ ಎಂಟನೆಯ ಶ್ಲೋಕದಲ್ಲಿ ಈ ವಿಧವಾಗಿ ಹೇಳಿದ್ದಾನೆ. ನಾನು ಧರ್ಮಗಳನ್ನು ತಿಳಿಸುವುದಕ್ಕೆ ಹುಟ್ಟುತ್ತಿದ್ದೇನೆ. ಧರ್ಮಗಳನ್ನು ತಿಳಿಸುವುದಕ್ಕೆ, ಅಧರ್ಮಗಳನ್ನು ಇಲ್ಲದಂತೆ ಮಾಡುವುದಕ್ಕೆ ಹುಟ್ಟಿದ ನಾನು ಇವು ಧರ್ಮಗಳೆಂದು, ಇವು ಅಧರ್ಮಗಳೆಂದು ತಿಳಿಸುತ್ತಿದ್ದೇನೆ. ಹಾಗೆ ತಿಳಿಸುವುದರಿಂದ, ದುಷ್ಕೃತಗಳಾದ ಅಧರ್ಮ ಆಚರಣೆಗಳನ್ನು ಬಿಟ್ಟು, ಸಾಧುತ್ವವನ್ನು ಹೊಂದಿದ ಧರ್ಮಗಳನ್ನು ಪ್ರಜೆಗಳು ಆಚರಿಸುತ್ತಾರೆ.

ಈ ನಾಲ್ಕು ಶ್ಲೋಕಗಳ ಸಾರಾಂಶಗಳು ದೇವರೇ ಹುಟ್ಟಿ ತನ್ನ ಧರ್ಮಗ ಳನ್ನು ತಿಳಿಸುವನೆಂದು ತಿಳಿಯುತ್ತದೆ. ನಾವು ಮುಂಚೆ ಹೇಳಿಕೊಂಡ ಸೂತ್ರದ ಪ್ರಕಾರ ಪದಾರ್ಥದಿಂದ ಅದರ ಧರ್ಮಗಳು ತಿಳಿಯಬೇಕು, ಇಲ್ಲದಿದ್ದರೆ ಪದಾರ್ಥದ ಧರ್ಮಗಳನ್ನನುಸರಿಸಿ ಪದಾರ್ಥ ತಿಳಿಯಬೇಕು. ಇದರ ಮೂಲಕ ಒಂದು ಪದಾರ್ಥಕ್ಕೆ ಒಂದು ಧರ್ಮ ಇರುತ್ತದೆಂದು, ಪದಾರ್ಥದಿಂದ ಅದರ ಧರ್ಮವನ್ನಾಗಲಿ, ಧರ್ಮದಿಂದ ಪದಾರ್ಥವನ್ನಾಗಲಿ ತಿಳಿಯುವುದು ಎಂದು ತಿಳಿಯುತ್ತದೆ. ಒಂದಕ್ಕೊಂದು ಅವಿನಾಭಾವ ಸಂಬಂಧವಿರುವ ಪದಾರ್ಥವಾಗಲಿ, ಅದರ ಧರ್ಮವಾಗಲಿ, ಏನೋ ಒಂದು ಉಳಿದಿರುವಾಗ ಒಂದರ ಆಧಾರದ ಮೇಲೆ ಇನ್ನೊಂದನ್ನು ತಿಳಿದುಕೊಳ್ಳಬಹುದು. ಎರಡು ಇಲ್ಲದಿರುವಾಗ ಯಾವ ಮನುಷ್ಯ ಅವುಗಳ ಉದ್ದೇಶವನ್ನು ಕುರಿತು ಹೇಳಲಾರನು. ಹಾಗೆಯೇ ಈಗ ದೇವರ ವಿಷಯಕ್ಕೆ ಬಂದರೆ, ಯಾವ ಮನುಷ್ಯನಾಗಲಿ ಮೊದಲು ದೇವರನ್ನು ನೋಡಿದ್ದರೆ ಆತನನ್ನು ಆಧಾರ ಮಾಡಿಕೊಂಡು ಆತನು ಧರ್ಮಗಳನ್ನು ಕಂಡುಕೊಳ್ಳಬಹುದು. ಮೊದಲು ದೇವರು ತಿಳಿಯದೆ ಹೋದರೆ ಆತನ ಧರ್ಮಗಳು ತಿಳಿದಿದ್ದರೆ ಅವುಗಳ ಆಧಾರದಿಂದ ದೇವರನ್ನು ತಿಳಿಯಬಹುದು. ಆದರೆ ಇಲ್ಲಿ ದೇವರಾಗಲಿ, ಆತನ ಧರ್ಮಗಳಾಗಲಿ ಎರಡು ಇಲ್ಲದಿರುವಾಗ ಮನುಷ್ಯನಿಗೆ ಯಾವ ಆಧಾರ ಇಲ್ಲದಂತೆ ಹೋಗಿದೆ. ಒಂದಕ್ಕೊಂದು

ಅವಿನಾಭಾವ ಸಂಬಂಧವಿರುವ ದೇವರು, ಧರ್ಮ ಎರಡು ಇಲ್ಲದಿರುವಾಗ ಮನುಷ್ಯ ಈಕಡೆ ಧರ್ಮವನ್ನಾಗಲಿ, ಆಕಡೆ ದೈವವನ್ನಾಗಲಿ ತಿಳಿಯುವುದಕ್ಕೆ ಅವಕಾಶವೆ ಇಲ್ಲ. ಆದ್ದರಿಂದ ಭೂಮಿಮೇಲೆ ದೇವರ ಜ್ಞಾನವನ್ನು, ಧರ್ಮಗಳನ್ನು ದೇವರೆ ಹೇಳಬೇಕು. ದೇವರ ಧರ್ಮಗಳು ದೇವರಿಗೆ ಹೊರತು ಯಾವ ಮನುಷ್ಯನಿಗೂ ತಿಳಿಯುವುದಿಲ್ಲವೆಂದು ಹೇಳಲಾಗಿದೆ.

ಮನುಷ್ಯರಿಗೆ ದೇವರಾಗಲಿ, ದೇವರ ಧರ್ಮಗಳಾಗಲಿ ತಿಳಿಯದಿರುವಾಗ ದೇವರೇ ಬಂದು ದೇವರ ಧರ್ಮಗಳನ್ನು ತಿಳಿಸಿದ್ದಾನೆ. ಹಾಗೆ ತಿಳಿಯಲಾದ ಧರ್ಮಗಳನ್ನು ಯಾರ ಮೂಲಕ ತಿಳಿಯಲ್ಪಟ್ಟಿವೆ ಎಂದು ಮನುಷ್ಯನಿಗೆ ತಿಳಿಯದೆ, ತನ್ನಂತೆ ಇರುವ ಒಬ್ಬ ಮನುಷ್ಯ ಹೇಳಿದ್ದಾನೆಂದುಕೊಳ್ಳುತ್ತಾನೆ. ಹೇಳಿದ ಮನುಷ್ಯ ದೇವರ ಅಂಶದಿಂದ ಬಂದಿರುವ ಭಗವಂತನೆಂದು ಯಾರಿಗೂ ತಿಳಿದಿಲ್ಲ. ಭೂಮಿಮೇಲೆ ಒಬ್ಬ ಮನುಷ್ಯನ ಮೂಲಕ ಧರ್ಮಗಳು ತಿಳಿಯಲ್ಪಟ್ಟರೂ, ಆ ಮನುಷ್ಯ ಭಗವಂತನೆಂದು, ಭಗವಂತನೇ ದೇವರೆಂದು ಯಾರು ಗ್ರಹಿಸಲಾರರು. ಧರ್ಮಗಳು ಇಲ್ಲದಂತೆಹೋಗಿ ಅಧರ್ಮಗಳ ಆಚರಣೆ ಮನುಷ್ಯರಲ್ಲಿ ಅಡಗಿರುವಾಗ, ದೇವರು ಮನುಷ್ಯನ ರೂಪದಲ್ಲಿ ಬಂದು ಧರ್ಮಗಳನ್ನು ತಿಳಿಸಿದರೂ, ಹೇಳಿದವನ ಬೆಲೆಯನ್ನು ತಿಳಿಯದ ಮನುಷ್ಯರು ತಮಗೆ ತಿಳಿದಿರುವವೆ ಧರ್ಮಗಳೆಂದು, ಭಗವಂತನು ಹೇಳಿರುವವು ಪೂರ್ತಿ ಅಧರ್ಮಗಳೆಂದು ಅಂದುಕೊಳ್ಳವುದೆ ಅಲ್ಲದೆ, ಭಗವಂತನು ಹೇಳುವ ಧರ್ಮಗಳನ್ನು ಪ್ರಚಾರವಾಗದಂತೆ ನೋಡಬೇಕೆಂದು ಪ್ರಯತ್ನ ಮಾಡುತ್ತಾ, ಈತನು ಅದೇ ಕೆಲಸವಾಗಿ ಇತರ ಮತ ಧರ್ಮಗಳನ್ನು ಬೋಧಿಸುತ್ತಿದ್ದಾನೆ ಎಂದು, ಇಂದೂಧರ್ಮವೆಂದು ಹೇಳಿಕೊಂಡು ಹಿಂದೂಗಳಂತೆ ಇದ್ದು ಪರಮತವನ್ನು ಬೋಧಿಸುತ್ತಿದ್ದಾನೆಂದು ಪ್ರಚಾರ ಮಾಡಿ, ನಿಜವಾದ ಧರ್ಮಗಳನ್ನು ಯಾರು ತಿಳಿದುಕೊಳ್ಳದಂತೆ ಮಾಡುತ್ತಾರೆ. ನಾವು ಹಿಂದೂಗಳು, ಹಿಂದೂ ಮತರಕ್ಷಕರು, ಹಿಂದೂ ಧರ್ಮಪೋಷಕರೆಂದು ಹೆಸರು ಇಟ್ಟುಕೊಂಡವರು, ತಮಗೆ ದೇವರ ಧರ್ಮಗಳು ಯಾವುವೋ ತಿಳಿಯದವರೂ, ಇಂದೂ

ಧರ್ಮಗಳೆಂದರೆ ಅರ್ಥವೂ ಸಹ ತಿಳಿಯದವರು ನಿಜವಾದ ದೇವರನ್ನು, ಕಾಣಿಸುವ ಭಗವಂತನನ್ನು ಸಾಧಾರಣ ಮನುಷ್ಯನನ್ನಾಗಿ ತಿಳಿದು, ಆತನನ್ನು ಕುರಿತು ಅವಹೇಳನವಾಗಿ ಮಾತನಾಡುತ್ತಾರೆ. ದೇವರ ಧರ್ಮಗಳನ್ನು ಭಗವಂತನ ಎದುರುಗಡೆ ದೂಷಿಸುತ್ತಾರೆ. ಮಾನವರನ್ನು ಉದ್ಧರಿಸುವುದಕ್ಕೆ ಅಂತಹ ದೇವರೆ ಭೂಮಿಮೇಲೆ ಭಗವಂತನಾಗಿ ಬಂದರೆ, ಆತನನ್ನು ಸಾಧಾರಣ ಮನುಷ್ಯನಿಗಿಂತ ಹೀನವಾಗಿ ಮನುಷ್ಯರು ನೋಡುವುದೆ ಅಲ್ಲದೆ, ನಾವೇ ನಿಜವಾದ ಧರ್ಮರಕ್ಷಕರೆಂದು ಹೇಳಿಕೊಳ್ಳುತ್ತಾ, ಭಗವಂತನು ಹೇಳುವ ಧರ್ಮಗಳು ತಮ್ಮ ಮತಕ್ಕೆ, ತಮ್ಮ ಧರ್ಮಕ್ಕೆ ವಿರುದ್ಧವೆಂದು ಭಗವಂತನನ್ನು ಹತ್ಯೆ ಮಾಡಬೇಕೆಂದು ಪ್ರಯತ್ನ ಮಾಡುವವರು ಸಹ ಇದ್ದಾರೆ.

ಭಗವದ್ಗೀತೆಯಲ್ಲಿ ಕೃಷ್ಣನು ರಾಜವಿದ್ಯಾ ರಾಜಗುಹ್ಯಯೋಗವೆಂಬ ಅಧ್ಯಾಯದಲ್ಲಿ ಹನ್ನೊಂದನೆಯ ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ.

***ಶ್ಲೋ॥ ಅವಜಾನಂತಿ ಮಾಂ ಮೂಢಾ ಮಾನುಷಿಂ ತನು ಮಾಶ್ರಿತಮ್।***
***ಪರಂಭಾವ ಮಜಾನನ್ತೋ ಮಮ ಭೂತ ಮಹೇಶ್ವರಮ್॥***

**ಭಾವಾರ್ಥ :–** ಸರ್ವ ಜೀವರಾಶಿಗಳಿಗೂ ದೇವರಾದ ನಾನು, ಮನುಷ್ಯ ಶರೀರವನ್ನು ಧರಿಸಿ ಭೂಮಿಮೇಲೆ ಮನುಷ್ಯರ ಮಧ್ಯದೊಳಗೆ ಬಂದರೆ, ಮೂಢರಾ (ಅಜ್ಞಾನಿಗಳಾ) ದವರು ನನ್ನ ದೈವತ್ವವನ್ನು ತಿಳಿದುಕೊಳ್ಳದೆ ನನ್ನನ್ನು ಅವಮಾನಿಸುತ್ತಿದ್ದಾರೆ.

ಕಲಿಯುಗಕ್ಕಿಂತ ಸ್ವಲ್ಪ ಉತ್ತಮವಾದ ದ್ವಾಪರಯುಗದಲ್ಲಿ ಈಗ ಇರುವಷ್ಟು ಮೂರ್ಖರು, ಮೂಢರು ಆಗ ಇಲ್ಲವೆಂದುಕೊಳ್ಳುತ್ತೇನೆ. ಸ್ವಲ್ಪ ಮೇಲೆನಿಸಿದ ಆ ಕಾಲದಲ್ಲಿ ಕೃಷ್ಣನು ತನಗೆ 90 ವರ್ಷದ ವಯಸ್ಸು ಬಂದಾಗ ದೇವರ ಧರ್ಮಗಳಾದ ಭಗವದ್ಗೀತೆಯನ್ನು ಹೇಳಿದ್ದಾನೆ. ಅದು ಯಾರು ಕೇಳದಂತೆ ಅರ್ಜುನನಿಗೆ ಮಾತ್ರವೇ ಹೇಳಲಾಗಿದೆ. ಯುದ್ಧರಂಗದಲ್ಲಿ ಒಂದುಬಾರಿ ಹೊರತುಪಡಿಸಿ ನಂತರ ಯಾವಾಗಲೂ ಜ್ಞಾನವನ್ನು ಹೇಳಿದಂತೆ ಇಲ್ಲ. ಒಂದುಬಾರಿ ಜ್ಞಾನವನ್ನು ಹೇಳಿದ ಆತನಿಗೂ ಸಹ ಮೂಢರಿಂದ ಅವಮಾನ

ತಪ್ಪಿಲ್ಲವೆಂದು ಹೇಳಿದಾಗ, ನಿತ್ಯವು ದೇವರ ಧರ್ಮಗಳು ಇವೆಯೆಂದು, ನೀವು ಆಚರಿಸುವವು ಅಧರ್ಮಗಳೆಂದು ಹೇಳುವ ನಮ್ಮಂತಹವರಿಗೆ ಈಗಿನಕಾಲದಲ್ಲಿ ಹೇಗಿರುತ್ತದೋ ನೀವೆ ಊಹಿಸಿಕೊಳ್ಳಬಹುದು. ನಾವು ಬರೆದ ತ್ರೈತಸಿದ್ಧಾಂತ ಭಗವದ್ಗೀತೆಯನ್ನು ಅನಂತಪುರಂ ಜಿಲ್ಲೆ, ಗುಂತಕಲ್ಲು ವಿಶ್ವಹಿಂದೂ ಪರಿಷತ್ ಆಫೀಸಿನ ಮುಂದೆ ನಾವು ಹಿಂದೂಗಳು ಎನ್ನುವವರು ಬೆಂಕಿಯಿಟ್ಟು ಸುಡುವುದು, ಫೋನ್‌ನಲ್ಲಿ ನಮ್ಮನ್ನು ದೂಷಿಸುವುದು ನಮಗೆ ಅವಮಾನವೇ ತಾನೆ! ಹೈದರಾಬಾದ್ ದಿಲ್‌ಸುಖ್‌ನಗರ್ ಬಿ.ಜೆ.ಪಿ ಕಾರ್ಯ ಕರ್ತರೆನ್ನುವವರು ನಮ್ಮ ಭಕ್ತರ ಮೇಲೆ ಭೌತಿಕ ದಾಳಿಗಳಿಗೆ ಇಳಿಯುವುದು ನಮಗೆ ಅವಮಾನವೆ ಅಲ್ಲವೆ! ನಾವು ಸ್ವಚ್ಛವಾಗಿ ಇಂದೂಧರ್ಮಗಳನ್ನು ಬೋಧಿಸಿದರೆ, ಪರಮತವನ್ನು ಬೋಧಿಸುತ್ತಾನೆಂದು ಪ್ರಚಾರ ಮಾಡಿ ಕೋರ್ಟಿನಲ್ಲಿ ಕೇಸುಗಳು ಹಾಕಿರುವ ಹಿಂದೂಗಳೂ ಸಹ ಇದ್ದಾರೆ. ತ್ರೈತಸಿದ್ಧಾಂತ ಭಗವದ್ಗೀತೆಯನ್ನು ಓದಿರಿ ಎಂದು ಗೋಡೆಗಳ ಮೇಲೆ ಹಂಪೆಕ್ಷೇತ್ರಕ್ಕೆ ಕಿಲೋಮೀಟರ್ ದೂರದಲ್ಲಿ ಬರೆದರೆ, ಹಂಪೆಗೆ ಹತ್ತಿರವಾಗಿ ಎಂತಹ ಬರಹಗಳು ಇರಬಾರದೆಂಬ ಉದ್ದೇಶದಿಂದ, ಆ ಬರಹಗಳನ್ನು ಬರೆದ ನಮ್ಮ ಭಕ್ತರಿಗೆ ಹೊಸಪೇಟೆ ಕೋರ್ಟಿನಲ್ಲಿ 20 ದಿನಗಳ ಜೈಲು ಶಿಕ್ಷೆ ಹಾಕಿಸಿದ ಹಿಂದೂಗಳು ಇದ್ದಾರೆ. ಅದ್ವೈತ ಸಿದ್ದಾಂತ, ವಿಶಿಷ್ಟಾದ್ವೈತ ಸಿದ್ಧಾಂತ, ದ್ವೈತ ಸಿದ್ದಾಂತಗಳ ಹಾಗೆ ನಾವು ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿದರೆ, ಹಿಂದೂಮತದಲ್ಲಿನ ಸಿದ್ಧಾಂತಗಳನ್ನೇ ತಿಳಿಯದ ಹಿಂದೂಗಳು ತ್ರೈತ ಸಿದ್ಧಾಂತ ಎನ್ನುವ ಹೆಸರನ್ನು ಕೇಳುತ್ತಲೇ, ಕ್ರೈಸ್ತ ಮತದಲ್ಲಿನ ತ್ರಿತ್ವದೊಳಗೆ ಸೇರಿಸಿ ಇದು ಕ್ರೈಸ್ತ ಬೋಧನೆ ಅಂದವರು ಸಹ ಇದ್ದಾರೆ.

ಒಂದುಬಾರಿ ಧರ್ಮಗಳನ್ನು ಬೋಧಿಸಿದ ಭಗವಂತನನ್ನೇ ಅವಮಾನ ಪಡಿಸಿದ ಹಿಂದೂಗಳು, ನಿತ್ಯ ದೇವರ ಧರ್ಮಗಳನ್ನು ಕುರಿತು ಹೇಳುವ ನಮ್ಮಂತಹವರನ್ನು ಹತ್ಯೆ ಮಾಡುವುದಕ್ಕೂ ಸಹ ಹಿಂಜರಿಯುವುದಿಲ್ಲ. ಇದೆಲ್ಲವೂ ಅಧರ್ಮಗಳನ್ನು ಆಶ್ರಯಿಸಿ ನಾವು ಹಿಂದೂಗಳೆಂದು ಹೇಳಿಕೊಳ್ಳುವವರಿಗೆ ಕಣ್ತೆರೆಸುವುದಕ್ಕೋಸ್ಕರ ಹೇಳುತ್ತಿದ್ದೇವೆ. ಹಿಂದೂ ಧರ್ಮರಕ್ಷಕರೆಂದು ಹೆಸರಿಟ್ಟು

ಕೊಂಡ ನಿಮಗೆ ಹಿಂದೂ (ಇಂದೂ) ಧರ್ಮಗಳೆಂದರೆ ಏನೋ ತಿಳಿದಿದೆಯಾ? ಎಂದು ಕೇಳುತ್ತಿದ್ದೇವೆ. ಹಿಂದೂಗಳ ಮುಸುಗಿನಲ್ಲಿರುವ ಪರಮತದವನೆಂದು ನನ್ನನ್ನು ನಿಂದಿಸಿದವರಿಗೆ ಕಣ್ತೆರೆಸುವುಕ್ಕೆ ಈ ಗ್ರಂಥವು ಉಪಯೋಗಪಡುತ್ತದೆ. ಹಿಂದೂ (ಇಂದೂ) ಮತದಲ್ಲಿನ ಜ್ಞಾನವನ್ನು ಹೇಳಬೇ ಕಾಗಿರುವುದು ಸಿದ್ಧಾಂತಕರ್ತರು. ಸಿದ್ಧಾಂತಕರ್ತರ ವಿಷಯವೇ ತಿಳಿಯದವರು ಹಿಂದೂಗಳು ಹೇಗಾಗುತ್ತಾರೆಂದು ಪ್ರಶ್ನಿಸುತ್ತಿದ್ದೇನೆ. ಪೂರ್ವಕಾಲದಲ್ಲಿ ಮೂವರು ಸಿದ್ಧಾಂತಕರ್ತರು ಅವರವರ ಸಿದ್ಧಾಂತಗಳನ್ನು ಅನುಸರಿಸಿ ಹಿಂದೂಗಳಿಗೆ ಜ್ಞಾನವನ್ನು ಬೋಧಿಸಿದ್ದಾರೆ. ಪ್ರಸ್ತುತ ನಮ್ಮ ಮುಖಾಂತರ ತ್ರೈತ ಸಿದ್ಧಾಂತವನ್ನು ಭಗವದ್ಗೀತೆಯಿಂದ ಪ್ರತಿಪಾದಿಸಲ್ಪಟ್ಟಿದೆ. ಗತದಲ್ಲಿ ಮೂವರು ಸಿದ್ಧಾಂತ ಕರ್ತರಾದ ಆದಿಶಂಕರಾಚಾರ್ಯರು, ರಾಮಾನುಜಾಚಾರ್ಯರು, ಮಧ್ವಾಚಾರ್ಯರ ಬೋಧನೆಗಳನ್ನು ಕೇಳಿದ ಹಿಂದುಗಳು ತ್ರೈತ ಸಿದ್ಧಾಂತವನ್ನು ಏಕೆ ಅಸೂಯವಾಗಿ ನೋಡುತ್ತಿದ್ದಾರೆ? ಎನ್ನುವ ಪ್ರಶ್ನೆಗೆ ಸುಲಭವಾಗಿ ಉತ್ತರ ದೊರೆಯುತ್ತದೆ. ಆ ಉತ್ತರ ಏನೆಂದರೆ! ಪ್ರಸ್ತುತ ಕಾಲದಲ್ಲಿ ನಾವು ಜ್ಞಾನಿಗಳು, ನಾವು ಹಿಂದೂಧರ್ಮ ಹಿರಿಯರು, ನಾವು ಸ್ವಾಮಿಗಳು, ನಾವು ವಿಶ್ವಹಿಂದೂ ರಕ್ಷಕರೆಂದು, ನಾವು ಧರ್ಮ ಬೋಧಕರೆಂದು, ನಾವು ಧರ್ಮಸಾಧಕರು ಅನ್ನುವವರಿಗೆಲ್ಲ ಗತದಲ್ಲಿನ ಸಿದ್ಧಾಂತಕರ್ತರ ಬೋಧನೆಗಳು, ಸಿದ್ಧಾಂತಗಳು ಎಂತಹ ಆತಂಕವನ್ನು ಉಂಟುಮಾಡಲಿಲ್ಲ. ಯಾರಿಗೆ ಇಷ್ಟವಾದ ಆಚರಣೆಯಾದರೂ ಸಿದ್ಧಾಂತಕರ್ತರ ಬೋಧನೆಗಳಿಗೆ ವಿರುದ್ಧವಾಗಿ ಕಾಣಿಸಲಿಲ್ಲ. ಆದರೆ ಈಗ ತ್ರೈತ ಸಿದ್ಧಾಂತ ಜ್ಞಾನ ಕೆಲವರಿಗೆ ಹೊರತುಪಡಿಸಿ ಎಲ್ಲರಿಗೂ ಇಷ್ಟವಾಗುತ್ತಿಲ್ಲ. ಕಾರಣ ಏನೆಂದರೆ **"ತ್ರೈತಸಿದ್ಧಾಂತ"**, ಭಗವದ್ಗೀತೆ ಗರ್ಭದಿಂದ ಹುಟ್ಟಿರುವುದು. ಪುರುಷೋತ್ತಮ ಪ್ರಾಪ್ತಿಯೋಗದಲ್ಲಿನ 16, 17ನೇ ಶ್ಲೋಕಗಳನ್ನು ಆಧಾರ ಮಾಡಿಕೊಂಡು ಹೇಳಲಾದ ಮೂರು ಆತ್ಮಗಳ ಸಿದ್ಧಾಂತವು. ತ್ರೈತಸಿದ್ಧಾಂತ ಭಗವದ್ಗೀತೆ ಅಂತರ್ಭಾವಾಗಿರುವುದರಿಂದ ಇದರಲ್ಲಿ ಗೀತೆಯಲ್ಲಿನ ಧರ್ಮಗಳನ್ನೇ ಹೇಳಬೇಕಾಗಿ ಬಂದಿದೆ. ಉಳಿದ ಸಿದ್ಧಾಂತಗಳೆಲ್ಲವೂ ವೇದಗಳಿಂದ ಹುಟ್ಟಿ ರುವವು. ತ್ರೈತಸಿದ್ಧಾಂತಕ್ಕೂ ವೇದಗಳಿಗೂ ಯಾವ ಸಂಬಂಧವೂ ಇಲ್ಲ.

ನಮಗಿಂತ ಮೊದಲು ಕೇರಳ ರಾಷ್ಟ್ರದಿಂದ ಅದ್ವೈತ ಸಿದ್ಧಾಂತಕರ್ತ ಆದಿಶಂಕರಾಚಾರ್ಯರು ಬಂದಿದ್ದಾರೆ. ನಂತರ ತಮಿಳನಾಡು ರಾಷ್ಟ್ರದಿಂದ ವಿಶಿಷ್ಟಾದ್ವೈತ ಸಿದ್ಧಾಂತಕರ್ತರಾದ ರಾಮಾನುಜಾಚಾರ್ಯರು ಬಂದಿದ್ದಾರೆ. ನಂತರ ಕರ್ನಾಟಕ ರಾಷ್ಟ್ರದಿಂದ ದ್ವೈತ ಸಿದ್ಧಾಂತಕರ್ತರಾದ ಮಧ್ವಾಚಾರ್ಯರು ಬಂದಿದ್ದಾರೆ. ಎಲ್ಲರಿಗಿಂತ ಮೊದಲು ಬಂದಿರುವ ಆದಿಶಂಕರಾಚಾರ್ಯರು 32 ವರ್ಷಗಳು ಮಾತ್ರವೇ ಜೀವಿಸಿ ತನ್ನ ಸಿದ್ಧಾಂತವನ್ನು ಹೇಳಿದ್ದಾನೆ. ನಂತರ ಬಂದಿರುವ ರಾಮಾನುಜಾಚಾರ್ಯರು 120 ವರ್ಷಗಳು ಬದುಕಿ ತನ್ನ ಸಿದ್ಧಾಂತವನ್ನು ಬೋಧಿಸಿದ್ದಾನೆ. ಆ ನಂತರ ಬಂದಿರುವ ಮಧ್ವಾಚಾರ್ಯರು 79 ವರ್ಷಗಳು ಬದುಕಿ ತನ್ನ ದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡಿದ್ದಾರೆ. ಆದರೆ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಎನ್ನುವ ಮೂರು ಸಿದ್ಧಾಂತಗಳು ವೇದಗಳಿಂದ ಹುಟ್ಟಿಬಂದಿವೆ. ವ್ಯಾಸನು ಬರೆದ ವೇದಗಳ ಆಧಾರದಿಂದ ಈ ಮೂರು ಸಿದ್ಧಾಂತಗಳು ಬಂದಿರುವುದರಿಂದ, ಮೂವರು ಸಿದ್ಧಾಂತಕರ್ತರು ಅವರವರ ಸಿದ್ಧಾಂತಗಳನ್ನು ಅನುಸರಿಸಿ ವೇದಗಳನ್ನು ಚೆನ್ನಾಗಿ ಪ್ರಚಾರ ಮಾಡಿದ್ದಾರೆ. ಮೂವರು ಆಚಾರ್ಯರ ಮೂರು ಸಿದ್ಧಾಂತಗಳು ವೇದಗಳಿಂದ ಹುಟ್ಟಿವೆ. ಆದ್ದರಿಂದ ಭಗವದ್ಗೀತೆಗೆ ಯಾವುದೇ ರೀತಿಯ ಸಂಬಂಧವಿಲ್ಲ. ಮೂವರು ಸಿದ್ಧಾಂತಕರ್ತರು ಹೇಳಿರುವುದರಿಂದ ಈಗಿನ ಕಾಲದಲ್ಲಿನ ಕೆಲವರು ಹೆಚ್ಚಾಗಿ ವೇದಗಳನ್ನು ತಲೆಗಂಟಿಸಿಕೊಂಡಿದ್ದಾರೆ. ಮುಖ್ಯವಾಗಿ ಮೂವರು ಸಿದ್ಧಾಂತ ಕರ್ತರು ಒಬ್ಬರು ಕೇರಳ ಬ್ರಾಹ್ಮಣರಾಗಿದ್ದು, ಎರಡನೆಯವರು ತಮಿಳುನಾಡು ಬ್ರಾಹ್ಮಣರು. ಮೂರನೆಯವರು ಕರ್ನಾಟಕದಲ್ಲಿನ ಉಡಿಪಿ ಬ್ರಾಹ್ಮಣರು. ಮೂವರು ಸಿದ್ಧಾಂತಕರ್ತರು ಬ್ರಾಹ್ಮಣರಾದ್ದರಿಂದ ಹೆಚ್ಚಾಗಿ ಬ್ರಾಹ್ಮಣರ ಸಮಾಜ ವೇದಗಳನ್ನು ಹೆಚ್ಚಾಗಿ ಅಭ್ಯಾಸಿಸಿದೆ. ಮೊದಲಿನಿಂದ ಬ್ರಾಹ್ಮಣರು ತಿಳಿವಳಿಕೆಯುಳ್ಳವರಾದ್ದರಿಂದ ಜ್ಞಾನ, ಧರ್ಮ ಎಲ್ಲ ವೇದಗಳಲ್ಲಿ ಇವೆಯೆಂದು ಹೇಳಿ ಎಲ್ಲರನ್ನೂ ವೇದಗಳ ಕಡೆ ನಡೆಸಿದ್ದಾರೆ. ವೇದಗಳು ಓದಿದವನೆ ಜ್ಞಾನಿಯೆಂದು, ಪ್ರಚಾರ ಮಾಡುವುದರಿಂದ ಜ್ಞಾನಜಿಜ್ಞಾಸಿಗಳೆಲ್ಲರೂ ವೇದಗಳ ಕಡೆ ಹೋಗಿದ್ದಾರೆ.

ಪ್ರಸ್ತುತ ಕಾಲದಲ್ಲಿ ಹೊಸದಾಗಿ ಹುಟ್ಟಿರುವುದು **ತ್ರೈತ ಸಿದ್ಧಾಂತ.** ತ್ರೈತಸಿದ್ಧಾಂತ ವೇದಗಳಿಗೆ ಸ್ವಲ್ಪವೂ ಸಂಬಂಧವಿಲ್ಲದಾಗಿದ್ದು, ವೇದಗಳನ್ನೇ ಅಧರ್ಮಗಳೆಂದು ಹೇಳಿದೆ. ಅಷ್ಟೇಅಲ್ಲದೆ ಯಜ್ಞಗಳು ಅಧರ್ಮ ಆಚರಣೆ ಎಂದು ಹೇಳುವುದರಿಂದ, ತ್ರೇತಾಯುಗದಲ್ಲಿಯೇ ಬ್ರಹ್ಮಜ್ಞಾನಿಯಾದ ರಾವಣಬ್ರಹ್ಮ ಅಧರ್ಮಾಚರಣೆಯಾದ ಯಜ್ಞಗ್ಗಳನ್ನು ನಿವಾರಿಸುವುದಕ್ಕೆ ಕೃಷಿ ಮಾಡಿದ್ದಾನೆಂದು ಹೇಳುವುದರಿಂದ, ಒಂದೇ ಬಾರಿಗೆ ವೇದ ಪ್ರಿಯರೆಲ್ಲರಿಗೂ ಕೆಳಗೆ ಮೇಲೆ ಉರಿದುಹೋಗಿದೆ. ಆ ಏಟಿನಿಂದ ಎಲ್ಲರೂ ತ್ರೈತ ಸಿದ್ಧಾಂತಕ್ಕೆ ವಿರೋಧಿ ಗಳಾಗಿದ್ದಾರೆ. ಉಳಿದವರನ್ನೂ ಸಹ ತ್ರೈತ ಸಿದ್ಧಾಂತಕ್ಕೆ ವಿರೋಧಿಗಳಾಗಿ ಪ್ರೇರೇ ಪಿಸಿದ್ದಾರೆ. ತ್ರೈತ ಸಿದ್ಧಾಂತ ಹಿಂದೂಮತವೇ ಅಲ್ಲವೆಂದು ಪ್ರಚಾರ ಮಾಡಿದ್ದಾರೆ. ತಿಳುವಳಿಕೆಯುಳ್ಳ ಕೆಲವರು ಹಾಗೆ ಪ್ರಚಾರ ಮಾಡಿದಾಗ, ತಿಳುವಳಿಕೆ ಇಲ್ಲದವರು ಸಹ ಸ್ವಲ್ಪವೂ ಸಹ ಆಲೋಚಿಸದಂತೆ ಅವರ ಮಾತುಗಳನ್ನೇ ಕುರುಡರಂತೆ ನಂಬಿ, ತ್ರೈತ ಸಿದ್ಧಾಂತವನ್ನು ದೂಷಿಸುವುದು ಪ್ರಾರಂಭಮಾಡಿದ್ದಾರೆ. ಕೆಲವರು ಸ್ವಂತ ಆಲೋಚನೆಯಿಲ್ಲದ ಪ್ರಜೆಗಳು ಇತರರು ಪ್ರೇರೇಪಿಸಿದಾಗ ಎಲ್ಲದಕ್ಕಿಂತ ಮೀರಿರುವುದು ತ್ರೈತಸಿದ್ಧಾಂತವೆಂದು ಗ್ರಹಿಸದೆ, ತ್ರೈತಸಿದ್ಧಾಂತವನ್ನು ಪ್ರತಿ ಪಾದಿಸಿದ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರನ್ನು ಅವಮಾನಿಸುವು ದಕ್ಕೆ, ನಿಂದಿಸುವುದಕ್ಕೆ ಆರಂಭಿಸಿದ್ದಾರೆ. ಆದರೆ ಯೋಗೀಶ್ವರರು ಇದೆಲ್ಲವೂ ಅಧರ್ಮಪರರು ಮಾಡುವ ಕುತಂತ್ರವೆಂದು ಗ್ರಹಿಸಿ, ತನ್ನ ಕೆಲಸವನ್ನು ತಾನು ಮಾಡುತ್ತಾ ನಿಜವಾದ ದೇವರ ಧರ್ಮಗಳನ್ನು ಪ್ರಚಾರ ಮಾಡುತ್ತಿದ್ದಾರೆ.

ದ್ವಾಪರಯುಗದಲ್ಲಿ ಈದಿನಕ್ಕಿಂತಲೂ ಹೆಚ್ಚಾಗಿ ಭಕ್ತಿ ಎಂದುಕೊಂಡು ಯಜ್ಞಯಾಗಗಳು ಮಾಡುತ್ತಿದ್ದರು. ಹಾಗೆಯೇ ಧ್ಯಾನ, ತಪಸ್ಸು, ದಾನಗಳು, ವೇದಮಂತ್ರೋಚ್ಛಾರಣೆಗಳು ಹೆಚ್ಚಾಗಿ ಇದ್ದವು. ನಿತ್ಯ ಯಜ್ಞ ಮಾಡುವವರು ಕೆಲವರಿರುವಾಗ, ನಿತ್ಯ ವೇದಪಾರಾಯಣ ಮಾಡುವವರು ಕೆಲವರಿರುತ್ತಿದ್ದರು. ಪ್ರತಿ ದಿನವು ಯಾರಿಗೋ ಒಬ್ಬರಿಗೆ ಯಾವುದೋ ಒಂದು ದಾನ ಮಾಡುವವರು ಕೆಲವರಿರುವಾಗ, ಪ್ರತಿ ದಿನ ಮುಂಜಾನೆ, ಸಾಯಂಕಾಲ ಎರಡು ಸಮಯ

ಧ್ಯಾನ ಮಾಡುವವರು, ವರ್ಷದಲ್ಲಿ ಒಂದು ತಿಂಗಳು ಅಥವಾ ಎರಡು ತಿಂಗಳಾದರು ಏಕದಾಟಿಯಾಗಿ ತಪಸ್ಸು ಮಾಡುವವರು ಇರುತ್ತಿದ್ದರು. ಇವೆಲ್ಲವೂ ಒಂದು ರೀತಿಯಾಗಿ ಈಗಿನ ಕಾಲದಲ್ಲಿಯೂ ಸಹ ಇವೆ. ಯಜ್ಞಗಳು ಮಾಡುವವರು, ಇತರರಿಗೆ ದಾನ ಮಾಡುವವರು, ವೇದಗಳನ್ನು ಪಠಿಸುವವರು, ಚಿಕ್ಕ ಧ್ಯಾನದಿಂದ ದೊಡ್ಡ ತಪಸ್ಸಿನವರೆಗೂ ಮಾಡುವವರು ಮನುಷ್ಯರ ದೃಷ್ಟಿಯಲ್ಲಿ ದೊಡ್ಡವರಾಗಿ, ಎಷ್ಟೋ ದೈವಜ್ಞಾನ ಇರುವವರಾಗಿ ಲೆಕ್ಕಿಸಲ್ಪಡುತ್ತಿದ್ದಾರೆ. ಅಂತಹವರನ್ನು ದೊಡ್ಡ ಧರ್ಮಪರರೆಂದುಕೊಳ್ಳುವುದು, ದೈವಮಾರ್ಗದಲ್ಲಿ ಇರುವವರಂತೆ ಅಂದುಕೊಳ್ಳುವುದು ಪೂರ್ವದ ಯುಗಗಳಿಂದ ಎಲ್ಲರಿಗೂ ಅಭ್ಯಾಸವಾಗಿದೆ. ದ್ವಾಪರಯುಗಕ್ಕಿಂತ ಹಿಂದಿನ ಯುಗಗಳಲ್ಲಿ ಯಜ್ಞಗಳು, ದಾನಗಳು, ತಪಸ್ಸುಗಳು ಮಾಡುವುದು ಇದ್ದರು, ವೇದಗಳು ಮಾತ್ರ ನಿರ್ಧಿಷ್ಟವಾಗಿ ಇವು ಎಂದು ಹೇಳಿಕೊಳ್ಳುವುದಕ್ಕೆ ಇಲ್ಲದಂತಿದ್ದವು. ಕೆಲವು ಶುಭಕಾರ್ಯಗಳಲ್ಲಿ ಕೆಲವು ಮಂತ್ರಗಳನ್ನು ಓದುತ್ತಿದ್ದರೂ, ಅವು ವೇದಮಂತ್ರಗಳು ಅಲ್ಲದಂತೆ ಬೇರೆ ಮಂತ್ರಗಳಾಗಿ ಇರುತ್ತಿದ್ದವು. ದ್ವಾಪರಯುಗದಲ್ಲಿ ವ್ಯಾಸಮಹರ್ಷಿ ನಾಲ್ಕು ವೇದಗಳನ್ನು ತಯಾರು ಮಾಡಿದ್ದಾನೆ. ವ್ಯಾಸಮಹರ್ಷಿ ವೇದಗಳನ್ನು ರಚಿಸಿದ ನಂತರ ಸ್ವಲ್ಪ ಕಾಲಕ್ಕೆ ಹದಿನೆಂಟು ಪುರಾಣಗಳನ್ನು ಸಹ ರಚಿಸಿದನು. ಆಗಲೂ ವ್ಯಾಸಮಹರ್ಷಿ ತಾನು ಮಾಡುವುದು ಒಳ್ಳೆಯ ಕೆಲಸವೆಂದು ತಿಳಿದು ಒಳ್ಳೆಯ ಉತ್ಸಾಹದಿಂದ ಚತುರ್ವಿದ ವೇದಗಳನ್ನು, ಅಷ್ಟಾದಶ ಪುರಾಣಗಳನ್ನು ಬರೆಯಲಾಗಿದೆ. ಹಾಗೆ ವ್ಯಾಸನಿಂದ ಬರೆಯಲಾದ ನಂತರ ವೇದಗಳನ್ನು, ಪುರಾಣಗಳನ್ನು ಎಲ್ಲರೂ ಓದಿದ್ದಾರೆ. ವೇದಗಳು ವ್ಯಾಸ ರಚಿತವಾಗಿ ಹೊರಗೆ ಬಂದಾಗ ನಂತರ ವ್ಯಾಸನು ಹೇಳಿದಂತೆ ವೇದಮಂತ್ರಗಳನ್ನು ಉಪಯೋಗಿಸಿ ಯಜ್ಞಯಾಗಗಳನ್ನು ಮಾಡುವವರು ಹೆಚ್ಚಾಗಿದ್ದಾರೆ. ವೇದ ಪಾರಾಯಣ ಮಾಡುವುದೆ ದೈವಮಾರ್ಗವೆಂದು, ವೇದಗಳನ್ನು ಬರೆದವನೆ ಭಗವಂತನೆಂದು ವ್ಯಾಸನನ್ನು ವ್ಯಾಸಭಗವಾನನೆಂದು, ಭಗವಾನ್ ವ್ಯಾಸನೆಂದು ಕರೆತಯತ್ತಿದ್ದರು. ತನ್ನನ್ನು ಪ್ರಜೆಗಳು ಹೊಗಳುತ್ತಿದ್ದರೆ ವ್ಯಾಸನು ಅದನ್ನು ನೋಡಿ ಸಂತೋಷಿ ಸುತ್ತಿದ್ದನು. ವ್ಯಾಸನ ಕಾಲದಲ್ಲಿ ಎಷ್ಟೋಜನ ದೊಡ್ಡ ಮಹರ್ಷಿಗಳೆಂದು

ಹೆಸರುವಾಸಿಯಾದವರು ಸಹ ಯಜ್ಞಗಳನ್ನು ಮಾಡುವುದರಲ್ಲಿ, ವೇದಗಳನ್ನು ಪ್ರಚಾರ ಮಾಡುವುದರಲ್ಲಿ ನಿಮಗ್ನರಾಗಿದ್ದರು.

ಇದೆಲ್ಲವೂ ಮಾನವರಾದ ನಮಗೆ ಒಳ್ಳೆಯದಾಗಿ ಕಾಣಿಸಿದರೂ ದೇವರ ದೃಷ್ಟಿಯಲ್ಲಿ ಧರ್ಮಗಳಿಗೆ ಪೂರ್ತಿಯಾಗಿ ಆತಂಕ ಏರ್ಪಟ್ಟಂತೆ, ಧರ್ಮಗಳು ತಿಳಿಯದಂತೆ ಹೋಗಿ ಅವುಗಳ ಸ್ಥಾನದಲ್ಲಿ ಅಧರ್ಮಗಳು ಬಂದು ಸೇರಿದಂತೆ, ಧರ್ಮಗಳಿಗೆ ಹಾನಿ ಏರ್ಪಟ್ಟು ಅಧರ್ಮಗಳು ಪ್ರಬಲಗೊಂಡಿವೆ ಎಂದು ತಿಳಿದಿದೆ. ಇದು ಕೆಲವರಿಗೆ ಆಶ್ಚರ್ಯವಾಗಿ ಅನಿಸಿದರು ನಿಜವಾಗಲು ಸತ್ಯ. ಯಾವಾಗಾದರೆ ಧರ್ಮಗಳಿಗೆ ಹಾನಿ ಏರ್ಪಟ್ಟು ಅಧರ್ಮಗಳು ಹೆಚ್ಚಾಗುತ್ತವೊ, ಆಗ ನಾನು ಅವತರಿಸಿ ಪುನಃ ಧರ್ಮಸಂಸ್ಥಾಪನೆ ಮಾಡುತ್ತೇನೆಂದು ದೇವರು ಹೇಳಿದಂತೆ, ದ್ವಾಪರಯುಗದಲ್ಲಿ ಧರ್ಮಗಳಿಗೆ ಅಂತಹ ಹೀನಸ್ಥಿತಿ ಏರ್ಪಟ್ಟಿರುವುದರಿಂದ, ದೇವರು ಭಗವಂತನಾಗಿ ಜನ್ಮಿಸಿ ಪುನಃ ತನ್ನ ಧರ್ಮಗಳನ್ನು ತಾನೆ ತಿಳಿಸಿದ್ದಾನೆ. ದೇವರ ಧರ್ಮಗಳು ದೇವರಿಗೆ ಹೊರತು ಇತರರ್‍ಯಾರಿಗೂ ತಿಳಿದಿಲ್ಲ. ಆದ್ದರಿಂದ ದೇವರೆ ಮಾನವರೂಪದಲ್ಲಿ ಬಂದು ಭಗವದ್ಗೀತೆ ರೂಪದಲ್ಲಿ ತನ್ನ ಧರ್ಮಗಳನ್ನು ತಿಳಿಸುವುದು ನಡೆದಿದೆ. ಭಗವಂತನಾದ ಶ್ರೀಕೃಷ್ಣನು ಆ ದಿನ ತಾನು ತಿಳಿಸುವ ಧರ್ಮಗಳೆಲ್ಲವೂ ಲೋಕ ವಿರುದ್ಧವಾದವೆಂದು, ಹಾಗೆಯೇ ಇತರರಿಗೂ ಒಳ್ಳೆಯದಾಗಿ ಕಾಣಿಸಿ ಅಭ್ಯಾಸವಾಗಿರುವವೆಲ್ಲವೂ ಅಧರ್ಮಗಳೆಂದು ತಿಳಿಸಿದರೆ, ತನ್ನ ಮಾತುಗಳನ್ನು ಯಾರು ಜೀರ್ಣಿಸಿಕೊಳ್ಳುವುದಿಲ್ಲವೆಂದು ತಿಳಿದು ತನಗೆ ಅನುಕೂಲದ ವ್ಯಕ್ತಿಯಾದ ಅರ್ಜುನನಿಗೆ ಮಾತ್ರವೇ ತಿಳಿಸಿದ್ದಾನೆ. ಆ ವಿಧವಾಗಿ ತಿಳಿಸಿದ ಜ್ಞಾನವು ಕೆಲವುದಿನಗಳಿಗೆ ಅರ್ಜುನನ ಮೂಲಕ ವ್ಯಾಸನಿಗೆ ತಿಳಿದಿದೆ. ವ್ಯಾಸನು ಎಷ್ಟೋ ತಿಳುವಳಿಕೆಯುಳ್ಳವನು, ಸೂಕ್ಷ್ಮಗ್ರಾಹಿ. ಆದ್ದರಿಂದ ಅರ್ಜುನನ ಮೂಲಕ ಕೇಳಿದ ವಿಷಯಗಳನ್ನು ಎಲ್ಲರಂತೆ ವಿರುದ್ಧವಾಗಿ ತಿಳಿಯದೆ ಎಷ್ಟೋ ತಿಳುವಳಿಕೆಯಿಂದ ಅವುಗಳಲ್ಲಿನ ಸತ್ಯವನ್ನು, ಧರ್ಮಗಳನ್ನು ಗ್ರಹಿಸಿದ್ದಾನೆ. ವ್ಯಾಸನು ಅರ್ಜುನನ ಮೂಲಕ ಕೇಳಿರುವವೆಲ್ಲ ತಾನು ಹೇಳಿರುವುದಕ್ಕೆ ಪೂರ್ತಿ ವಿರುದ್ಧವಾಗಿದ್ದರೂ,

ಅದೆಲ್ಲವೂ ನಿಜವೆಂದು ತನ್ನ ತಪ್ಪನ್ನು ತಪ್ಪಾಗಿ ಗ್ರಹಿಸಿದ್ದಾನೆ. ಕೃಷ್ಣನು ಯುದ್ಧ ಸಮಯದಲ್ಲಿ ಅರ್ಜುನನಿಗೆ ಹೇಳಿದ ವಿಷಯಗಳೆಲ್ಲವೂ ಅರ್ಜುನನಿಗೆ ಅಗತ್ಯವಿಲ್ಲ ತನಗೆ ಅಗತ್ಯವೆಂದುಕೊಂಡಿದ್ದಾನೆ. ಕೃಷ್ಣನು ಎಷ್ಟು ತಿಳುವಳಿಕೆಯಿಂದ ತನಗೆ ತಿಳಿಯಬೇಕಾದ ಜ್ಞಾನವನ್ನು ಅರ್ಜುನನ ಮೂಲಕ ತಿಳಿಸಿದ್ದಾನೋ ತಿಳಿದುಕೊಂಡನು. ಅದಕ್ಕೆ ತಾನು ಪೂರ್ತಿಯಾಗಿ ಅಧರ್ಮಗಳನ್ನು ಪ್ರಚಾರ ಮಾಡಿದ್ದೇನೆಂದು ಚಿಂತಿಸಿದ್ದಾನೆ.

ಆ ವಿಧವಾಗಿ ತನ್ನ ತಪ್ಪನ್ನು ತಿಳಿದುಕೊಂಡ ವ್ಯಾಸಮಹರ್ಷಿ ಅದಕ್ಕೆ ಪರಿಷ್ಕಾರ ಮಾರ್ಗವೇನೆಂದು ಆಲೋಚಿಸಿದನು. ಕೊನೆಗೆ ತನ್ನ ಯೋಚನೆಗೆ ಒಂದು ವಿಷಯ ತಿಳಿಯಿತು. ತನ್ನಲ್ಲಿ ಬಂದಿರುವ ಯೋಚನೆಗಳ ಪ್ರಕಾರ ತನ್ನ ಅಧರ್ಮಪ್ರಚಾರದಿಂದ ಬಂದಿರುವ ಪಾಪಕ್ಕೆ ಪರಿಹಾರವಾಗಿ ಕೃಷ್ಣನು ಹೇಳಿದ ಧರ್ಮಗಳನ್ನು ತಾನೇ ಸ್ವತಃ ಪ್ರಜೆಗಳಿಗೆ ತಿಳಿಸಬೇಕೆಂದುಕೊಂಡಿದ್ದಾನೆ. ಆ ವಿಧವಾಗಿ ಅಂದುಕೊಂಡ ತಕ್ಷಣ ಅರ್ಜುನನ ಮೂಲಕ ತಿಳಿದ ವಿಷಯವೆಲ್ಲವೂ ಗ್ರಂಥರೂಪದಲ್ಲಿ ಬರೆದಿದ್ದಾನೆ. ಹಾಗೆ ಬರೆಯಲಾದ ಗ್ರಂಥವೇ ಇಂದು ನಮ್ಮ ಮುಂದಿರುವ ಭಗವದ್ಗೀತೆ. ಭಗವದ್ಗೀತೆಯನ್ನು ಬರೆಯದ ಮೊದಲು ಭಗವದ್ಗೀತೆ ನೂರಕ್ಕೆ ನೂರುಪಾಲು ವಿರುದ್ಧವಾಗಿರುವ ವೇದಗಳನ್ನು, ಪುರಾಣಗಳನ್ನು ಬರೆದ ವ್ಯಾಸನು ತನ್ನ ತಪ್ಪನ್ನು ಸರಿತಿದ್ದುಕೊಳ್ಳುವ ಪ್ರಯುಕ್ತ ಭಗವದ್ಗೀತೆಯನ್ನು ಬರೆಯಲಾಗಿದೆ. ವ್ಯಾಸನು ಮಾರು ಮನಸ್ಸನ್ನು ಹೊಂದಿದವನಾಗಿ ಭಗವಂತನು ಹೇಳಿರುವುದು ಹೇಳಿದಂತೆ ಬರೆದಾಗ, ಅದನ್ನು ನೋಡಿದ ಅಧರ್ಮಪರರು ಯಜ್ಞಗಳನ್ನು, ವೇದಗಳನ್ನು, ಧ್ಯಾನಗಳನ್ನು (ತಪಸ್ಸುಗಳನ್ನು) ಬಿಡಲಾರದೆ ವ್ಯಾಸನ ಮೇಲೆಯೇ ಅಸೂಯಪಟ್ಟಿದ್ದಾರೆ. ತಾವು ಆಚರಿಸುತ್ತಿರುವವು ಅಧರ್ಮಗಳೆಂದು, ವ್ಯಾಸನು ಎರಡನೆ ಬಾರಿ ಬರೆದ ಭಗವದ್ಗೀತೆಯಲ್ಲಿರುವವು ನಿಜವಾದ ಧರ್ಮಗಳೆಂದು ತಿಳಿದುಕೊಳ್ಳದೆಹೋಗಿದ್ದಾರೆ. ವ್ಯಾಸನು ಮತಿಭ್ರಮಿಸಿ ಮೊದಲು ಬರೆದ ವೇದಗಳಿಗೆ ವಿರುದ್ದವಾಗಿ ಗೀತೆಯನ್ನು ಬರೆದಿದ್ದಾನೆ

ಎಂದುಕೊಂಡಿದ್ದಾರೆ. ಆದರೆ ವ್ಯಾಸನ ಮುಂದೆ ತಮ್ಮ ಉದ್ದೇಶವನ್ನು ಹೇಳುವುದಕ್ಕೆ ಯಾರಿಗೂ ಧೈರ್ಯವು ಇಲ್ಲದಂತೆಹೋಗಿದೆ.

ಸ್ವಲ್ಪಕಾಲಕ್ಕೆ ವ್ಯಾಸನು ಮರಣಿಸಿದ ನಂತರ, ವ್ಯಾಸನು ಬರೆದ ಸಂಸ್ಕೃತ ಶ್ಲೋಕಗಳ ರೂಪದಲ್ಲಿರುವ ಭಗವದ್ಗೀತೆಯೊಳಗೆ ಆ ದಿನ ಶ್ಲೋಕಗಳನ್ನು ಬರೆಯಲಾದ ಪಾಂಡಿತ್ಯ ಇರುವವರು ಯಜ್ಞಗಳಿಗೂ, ವೇದಗಳಿಗೂ ಸಂಬಂಧಿ ಸಿದ ಶ್ಲೋಕಗಳನ್ನು ತಯಾರುಮಾಡಿಕೊಂಡು ಗೀತೆಯೊಳಗೆ ಅವಕಾಶವಿರುವ ಕಡೆ ಸೇರಿಸುವುದು ನಡೆದಿದೆ. ವ್ಯಾಸನು ಕೃಷ್ಣನು ಹೇಳಿದ ನಿಜವಾದ ಭಗವದ್ಗೀತೆಯನ್ನು ಬರೆದಿಟ್ಟುಹೋದರೆ, ನಂತರ ಕೆಲವರು ಸ್ವಾರ್ಥಪರರಾದ ಅಧರ್ಮಪರರ ಮೂಲಕ ಗೀತೆಯಲ್ಲಿ ಸ್ವಲ್ಪ ಕಲುಷಿತವು ಏರ್ಪಟ್ಟಿದೆ. ಆಗಿನಿಂದ ಗೀತೆ ಧರ್ಮ ಅಧರ್ಮಗಳನ್ನು ಸೇರಿಸಿ, ಎರಡು ವಿಧಗಳಲ್ಲಿ ಬೋಧಿಸುವುದಾಗಿ ಕಾಣಿಸುತ್ತದೆ. ಈ ವಿಧವಾಗಿ ಹಿಂದೂ ಧರ್ಮಗಳು ಯಾವತ್ತೋ ಭ್ರಷ್ಟು ಹಿಡಿದುಹೋಗಿವೆ. ಧರ್ಮ ಅಧರ್ಮ ಸಮ್ಮೇಳನವಾಗಿರುವ ಭಗವದ್ಗೀತೆಯನ್ನು ಓದಿದವರು, ಎಲ್ಲರಿಗೂ ಅಭ್ಯಾಸವಾದ ಅಧರ್ಮಗಳನ್ನೇ ಗೀತೆಯಲ್ಲಿ ತೆಗೆದುಕೊಳ್ಳುತ್ತಿದ್ದಾರೆ. ಧರ್ಮಗಳನ್ನು ಬಿಡುತ್ತಿದ್ದಾರೆ. ಕೃಷ್ಣನು ಹೇಳಿದ, ವ್ಯಾಸನು ಬರೆದ ಉದ್ದೇಶಗಳನ್ನು ಗ್ರಹಿಸದೆ ಹೋಗಿದ್ದಾರೆ, ವ್ಯಾಸನು ಮುಂಚೆ ತಾನು ಯಜ್ಞಗಳನ್ನು, ವೇದಗಳನ್ನು ಕುರಿತು ಬರೆದಿರುವುದರಿಂದ, ಗೀತೆಯಲ್ಲಿಯೂ ಸಹ ಕೆಲವರಿಗೆ ಅವುಗಳೆ ಅರ್ಥವಾಗಿವೆ. ವ್ಯಾಸನು ತನ್ನ ತಪ್ಪನ್ನು ಸರಿದಿದ್ದುಕೊಂಡರೂ, ಮನುಷ್ಯರು ಮಾತ್ರ ತಮ್ಮ ಉದ್ದೇಶಕ್ಕೆ ಅನುಗುಣವಾಗಿದ್ದು, ತಮ್ಮ ತಪ್ಪನ್ನು ತಿಳಿದುಕೊಳ್ಳದೆಹೋಗಿದ್ದಾರೆ. ಅಂದಿಗೂ ಇಂದಿಗೂ ಮೂರ್ಖ ರಾಗೆ ಪ್ರವರ್ತಿಸುತ್ತಾ ತಮ್ಮವೇ ಧರ್ಮಗಳೆಂಬ ಉದ್ದೇಶದಲ್ಲಿದ್ದಾರೆ.

ಈ ಮಧ್ಯ ಕಾಲದಲ್ಲಿ 2000 ಇಸವಿಯಲ್ಲಿ ನಾವು ತ್ರೈತಸಿದ್ಧಾಂತವನ್ನು ಉಪಯೋಗಿಸಿ ಭಗವದ್ಗೀತೆಯನ್ನು ಬರೆದಾಗ ವ್ಯಾಸನು ಬರೆದ ಶ್ಲೋಕಗಳಿಗೆ

ಭಾವವು ಬರೆದು, ಮಧ್ಯದಲ್ಲಿ ಅಧರ್ಮವರರು ಸೇರಿಸಿದ ಶ್ಲೋಕಗಳಿಗೆ ಭಾವವನ್ನು ಬರೆಯದಂತೆ ಬಿಟ್ಟಿದ್ದೇವೆ. ಅಂತಹ ಶ್ಲೋಕಗಳನ್ನು ಕಲ್ಪಿತ ಶ್ಲೋಕಗಳೆಂದು ಬರೆದಿದ್ದೇವೆ. ನಾವು ಆ ವಿಧವಾಗಿ ಕಲ್ಪಿತ ಶ್ಲೋಕಗಳನ್ನು ಗುರುತಿಸಿ ಪಕ್ಕಕ್ಕಿಡುವುದನ್ನು ಕೆಲವರು ಜೀರ್ಣಿಸಿಕೊಳ್ಳದೆ, ನಾವು ಹಿಂದೂಗಳ ಮುಸುಗಿ ನಲ್ಲಿರುವ ಕ್ರೈಸ್ತರೆಂದು, ತ್ರೈತ ಎಂದರೆ ಕ್ರೈಸ್ತಮತದಲ್ಲಿನ ತ್ರಿತ್ವವೆಂದು, ಹಿಂದುಗಳನ್ನು ಒಳೊಳಗೆ ಕ್ರೈಸ್ತರಾಗಿ ಮತಮಾರ್ಪಾಡುಗಳು ಮಾಡುತ್ತಿದ್ದೇವೆಂದು ಅಜ್ಞಾನ ಪ್ರಜೆಗಳಿಗೆ ತಿಳಿಸಿ ನಮ್ಮ ಮೇಲೆ ಹುರಿದುಂಬಿಸುವುದು ನಡೆದಿದೆ. ಅಂತಹವರ ಮೂಲಕ ನಮಗೆ ಸ್ವಲ್ಪ ಆತಂಕಗಳು ಏರ್ಪಟ್ಟರು, ತ್ರೈತಸಿದ್ಧಾಂತ ಜ್ಞಾನವನ್ನು ಎಷ್ಟೋಜನ ಜ್ಞಾನಿಗಳಾದವರು ತಿಳಿದುಕೊಂಡು ವ್ಯಾಸನಂತೆ ಬದಲಾದವರು ಸಹ ಇದ್ದಾರೆ. "ಇಷ್ಟುಕಾಲ ನಾವು ಇತರರ ಗ್ರಂಥಗಳು ಓದಿ, ಇತರರ ಬೋಧನೆಗಳು ಕೇಳಿ ಜ್ಞಾನಿ ಗಳಾಗಿದ್ದೇವೆಂದುಕೊಂಡಿದ್ದೆವು. ಈಗ ತ್ರೈತಸಿದ್ಧಾಂತ ಭಗವದ್ಗೀತೆಯನ್ನು ಓದಿದ ನಂತರ ಇಲ್ಲಿಯವರೆಗೂ ನಮಗೆ ತಿಳಿದಿರುವುದು ಜ್ಞಾನವೇ ಅಲ್ಲವೆಂದು, ಇಲ್ಲಿಯವರೆಗೂ ಕಾಲವೆಲ್ಲವೂ ವ್ಯರ್ಥವಾಗಿದೆ ಎಂದು" ದುಃಖಪಡುವವರು ಎಷ್ಟೋಜನ ಇದ್ದಾರೆ. ಜ್ಞಾನದಲ್ಲಿ ಎಷ್ಟೋ ಹೆಸರುವಾಸಿಯಾದವರೂ ಸಹ ನಮ್ಮ ಜ್ಞಾನವನ್ನು ತಿಳಿದ ನಂತರ ತಮಗೆ ಇಲ್ಲಿಯವರೆಗೂ ತಿಳಿದ ಜ್ಞಾನವು ಈ ಜ್ಞಾನದ ಮುಂದೆ ಜ್ಞಾನವೇ ಅಲ್ಲವೆಂದು ಹೇಳುವುದು ನೋಡಿದರೆ, ಮೂರ್ಖರು ಉಂಟುಮಾಡುವ ಆತಂಕಗಳಿಗಿಂತ ನಮ್ಮ ಜ್ಞಾನವನ್ನು ತಿಳಿದು ಸಂತೋಷಿಸುವವರನ್ನು ನೋಡಿದ ನಂತರ ನಮಗೆ ಬಂದಿರುವ ಉತ್ಸಾಹ ದೊಡ್ಡದೆಂದು ಹೇಳಬಹುದು. ಭಗವದ್ಗೀತೆಯಲ್ಲಿನ ಅಸಲಾದ ಧರ್ಮಗಳು ಹೊರಗೆ ಬಂದರೆ ತಮಗೆ ಇಲ್ಲಿಯವರೆಗಿರುವ ಗೌರವವು ಪ್ರಜೆಗಳಲ್ಲಿ ಇಲ್ಲದಂತೆ ಹೋಗುತ್ತದೆಂದು ಭಯಪಡುವವರು ನಮಗೆ ಎಷ್ಟು ಆತಂಕಗಳು ಉಂಟುಮಾಡಿದರೂ, ಎಷ್ಟುಜನರನ್ನು ನಮ್ಮ ಮೇಲೆ ಹುರಿದುಂಬಿ ಸಿದರು ನಾವು ಸ್ವಲ್ಪವೂ ಸಹ ಭಯಪಡುವುದಿಲ್ಲ.

ಒಬ್ಬ ಮನುಷ್ಯ ಜನನ ಮರಣ ಚಕ್ರಗಳಿಂದ ಹೊರಬಿದ್ದು ದೇವರಲ್ಲಿ ಐಕ್ಯವಾಗುವುದಕ್ಕೆ ಅವರು ಪೂರ್ವದಲ್ಲಿ ಮಾಡಿಕೊಂಡ ಪಾಪ ಪುಣ್ಯಗಳನ್ನು ಇಲ್ಲದಂತೆ ಮಾಡಿಕೊಳ್ಳಬೇಕು. ಪಾಪಪುಣ್ಯಗಳು ಇಲ್ಲದಂತೆ ಹೋಗುವುದಕ್ಕೆ ಎರಡೇ ಮಾರ್ಗಗಳು ಇವೆ. ಒಂದು ಅನುಭವಿಸಿ ಮುಗಿಸಬೇಕು. ಎರಡು ದೇವರ ಜ್ಞಾನವನ್ನು ತಿಳಿಯುವುದರಿಂದ ಏರ್ಪಟ್ಟ ಜ್ಞಾನಾಗ್ನಿಯಿಂದ ಸುಟ್ಟು ಹಾಕಬೇಕು, ಮೊದಲಿನ ಮಾರ್ಗದ ಪ್ರಕಾರ ಅನುಭವಿಸಿ ಕರ್ಮವನ್ನು ಇಲ್ಲದಂತೆ ಮಾಡಿಕೊಳ್ಳುವುದು ಸಾಧ್ಯವಾಗದ ಕೆಲಸವಾಗುತ್ತದೆ. ಏಕೆಂದರೆ! ಒಂದುಕಡೆ ಅನುಭವಿಸಿ ಮುಗಿಸುತ್ತಿದ್ದರೆ ಮತ್ತೊಂದು ಕಡೆ ಹೊಸದಾಗಿ ತಯಾರಾಗಿ ಬರುತ್ತಿರುತ್ತದೆ. ಆದ್ದರಿಂದ ಪಾಪಪುಣ್ಯಗಳನ್ನು (ಕರ್ಮವನ್ನು) ಅನುಭವಿಸುವುದ ರಿಂದ ಮುಗಿಯುವುದಿಲ್ಲವೆಂದು ತಿಳಿಯುತ್ತದೆ. ಇನ್ನು ಎರಡನೇ ಮಾರ್ಗದ ಪ್ರಕಾರ ದೈವಜ್ಞಾನ ಪಡೆಯುವುದರಿಂದ, ಮನುಷ್ಯನಲ್ಲಿ ಹುಟ್ಟುವ ಜ್ಞಾನಾಗ್ನಿಯಿಂದ ಕರ್ಮವನ್ನು ಸುಲಭವಾಗಿ ಇಲ್ಲದಂತೆ ಮಾಡಿಕೊಳ್ಳಬಹುದು. ಇದೇ ವಿಷಯವನ್ನೇ ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ 37ನೇ ಶ್ಲೋಕದಲ್ಲಿ ಹೇಳಿದ್ದಾರೆ.

***ಶ್ಲೋ॥ ಯಥೈಧಾಂಸಿ ಸಮಿದ್ಧೋಗ್ನಿ ರ್ಭಸ್ಮಸಾತ್ಕುರು ತೇರ್ಜುನ।***
***ಜ್ಞಾನಾಗ್ನಿ ಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ॥***

**ಭಾವ :–** ಯಾವ ವಿಧವಾಗಿ ಅಗ್ನಿಯಲ್ಲಿ ಕಟ್ಟಿಗೆಗಳು ಸುಟ್ಟುಹೋಗುತ್ತಿವೆಯೋ, ಅದೇ ವಿಧವಾಗಿ ಜ್ಞಾನವೆಂಬ ಅಗ್ನಿಯಲ್ಲಿ ಮನುಷ್ಯನ ಸರ್ವ ಕರ್ಮಗಳೂ ಸುಟ್ಟುಹೋಗುತ್ತವೆ.

ಮನುಷ್ಯ ತನ್ನ ಕರ್ಮಗಳನ್ನು ಇಲ್ಲದಂತೆ ಮಾಡಿಕೊಳ್ಳುವುದಕ್ಕೆ ಜ್ಞಾನವನ್ನು ಧರ್ಮಯುಕ್ತವಾಗಿ ತಿಳಿದಾಗ ಕರ್ಮರಾಹಿತ್ಯವಾಗಿ ಮುಕ್ತಿ ಲಭಿಸುತ್ತದೆ. ಕರ್ಮ ರಾಹಿತ್ಯಕ್ಕೆ ಬೇಕಾದ ಜ್ಞಾನವು ಧರ್ಮಯುಕ್ತವಾಗಿ ಭಗವದ್ಗೀತೆಯಲ್ಲಿ ತಿಳಿಸಲಾಗಿದೆ. ಇದೇ ವಿಷಯವನ್ನೇ ನಾವು ಹೆಚ್ಚಾಗಿ ಬೋಧಿಸುತ್ತಿರುತ್ತೇವೆ.

ಪ್ರತಿ ಮನುಷ್ಯ ಮುಕ್ತಿ ಪಡೆಯುವುದಕ್ಕೆ ಅಗತ್ಯವಾದ ಜ್ಞಾನ ಭಗವದ್ಗೀತೆಯಲ್ಲಿ ಇದೆ. ಆದ್ದರಿಂದ ಪ್ರತಿಯೊಬ್ಬರೂ ಗೀತೆಯನ್ನು ಓದಿರಿ ಎಂದೂ ಹೇಳುತ್ತಾ, ಭಗವದ್ಗೀತೆಯಲ್ಲಿನ ವಿಷಯಗಳನ್ನು ಎಲ್ಲರಿಗೂ ಸುಲಭವಾಗಿ ಅರ್ಥವಾಗುವುದಕ್ಕೆ **ತ್ರೈತಸಿದ್ಧಾಂತ ಭಗವದ್ಗೀತೆ** ಎಂದು ಹೆಸರಿಟ್ಟು ಗೀತೆಯನ್ನು ಬರೆಯುವುದು ನಡೆದಿದೆ. ತ್ರೈತಸಿದ್ಧಾಂತ ಭಗವದ್ಗೀತೆ ಅಚ್ಚುಹಾಕಲ್ಪಟ್ಟು ಗ್ರಂಥರೂಪದಲ್ಲಿ 2000ದ ಇಸವಿಯಲ್ಲಿ ಬಂದಿದೆ. ಆಗ ಬಹಳಜನರಿಗೆ ತ್ರೈತಸಿದ್ಧಾಂತ ಭಗವದ್ಗೀತೆಗಳನ್ನು ಉಚಿತವಾಗಿ ಕೊಟ್ಟಿದ್ದೇವೆ. ನಾನು ಚಿಕ್ಕ ವಯಸ್ಸಿನಲ್ಲಿ 7, 8 ತರಗತಿಗಳು ಗೋರಂಟ್ಲ ಹೈಸ್ಕೂಲ್‌ನಲ್ಲಿ ಓದುತ್ತಿರುವಾಗ ಪಕ್ಕದ ಹಳ್ಳಿಯಿಂದ ಒಬ್ಬ ಬ್ರಾಹ್ಮಣರ ಹುಡುಗನೂ ಸಹ ಬಂದು ನಾನಿರುವ ತರಗತಿಯಲ್ಲಿಯೆ ಓದುತ್ತಿದ್ದನು. ಆತನು 2000ದ ಇಸವಿಯಲ್ಲಿ ಹೈದರಾಬಾದ್‌ನಲ್ಲಿ ಪೊಲೀಸ್ ಆಫೀಸರಾಗಿ ಇರುವುದು ತಿಳಿದು ಆತನಿಗೂ ಸಹ ಒಂದು ಭಗವದ್ಗೀತೆಯನ್ನು ಸ್ವತಃ ಹೋಗಿ ಕೊಡಲಾಗಿದೆ. ವಾರದ ನಂತರ, ಭಗವದ್ಗೀತೆಯನ್ನು ಕೊಟ್ಟಾಗ ನನ್ನ ಹಿಂದೆ ಬಂದಿರುವ ಮನುಷ್ಯನ ಹತ್ತಿರ ನಮ್ಮ ಭಗವದ್ಗೀತೆಯನ್ನು ಕುರಿತು ಆತನು ಮಾತನಾಡುತ್ತಾ "ತ್ರೈತಸಿದ್ಧಾಂತ ಎಂದು ಇದರಲ್ಲಿ ಇದೆ. ಇದು ಕ್ರೈಸ್ತಸಂಸ್ಥೆಗೆ ಸಂಬಂಧಿಸಿರುವುದಾಗಿ ಅನಿಸುತ್ತದೆ. ನೀನು ಇದನ್ನು ಓದಬೇಡ" ಎಂದು ಹೇಳುವುದು ನಡೆದಿದೆ. ನನ್ನಹಿಂದೆ ಬಂದಿರುವ ಮನುಷ್ಯ ಆ ಪೋಲಿಸ್ ಆಫೀಸರ್‌ಗೆ ಒಂದು ಸಮಯದಲ್ಲಿ ಸಹೋದ್ಯೋಗಿಯಾಗಿ ಕೆಲಸಮಾಡುವವನು. ಆ ಪರಿಚಯದಿಂದ ಆತನಿಗೆ ನನ್ನ ಭಗವದ್ಗೀತೆಯನ್ನು ಕುರಿತು ಹೇಳುವುದು ನಡೆದಿದೆ.

ನಾನು ಬ್ರಾಹ್ಮಣನು ಅಲ್ಲವೆಂದು ಕಮ್ಮಕುಲದಲ್ಲಿ ಹುಟ್ಟಿದವನೆಂದು ಆ ಪೊಲೀಸ್ ಆಫೀಸರ್‌ಗೆ ಮೊದಲೇ ತಿಳಿದಿದೆ. ಆತನಲ್ಲಿ ಬ್ರಾಹ್ಮಣರೇ ಜ್ಞಾನ ಹೇಳಬೇಕು, ಇತರರು ಹೇಳಬಾರದೆಂಬ ಅಸೂಯೆ ಇರುವುದರಿಂದ, ಆತನು ಆ ವಿಧವಾಗಿ ನಾನು ಬರೆದ ಭಗವದ್ಗೀತೆಯನ್ನು ಓದಬೇಡ ಎಂದು ಹೇಳುವುದು ನಡೆದಿದೆ. ನನ್ನ ಸಿದ್ಧಾಂತ ತ್ರೈತಸಿದ್ಧಾಂತ ಆಗಿರುವುದರಿಂದ ತ್ರೈತ ಎಂಬ

ಪದವನ್ನು ನೋಡುತ್ತಲೇ ಕ್ರೈಸ್ತರು ತ್ರಿತ್ವವಾಗಿ ವರ್ಣಿಸಿ ನನ್ನದು ಕ್ರೈಸ್ತ ಬೋಧನೆಗಳೆಂದು ದುಷ್ಪ್ರಚಾರ ಮಾಡುವುದಕ್ಕೆ ಅನುಕೂಲಿಸಿದೆ. 2010ನೇ ಇಸವಿಯಲ್ಲಿ ನಮ್ಮ ರಚನೆಗಳಲ್ಲಿ **"ದೆವ್ವಗಳ– ಭೂತಗಳ ಯಥಾರ್ಥಸಂಘಟನೆಗಳು"** ಎಂಬ ಗ್ರಂಥವು ತಯಾರಾಗಿ ಬಂದಿದೆ. ನನ್ನ ರಚನೆಯಲ್ಲಿ ಆ ಗ್ರಂಥವು 25ನೆಯದು. ಆ ಗ್ರಂಥದಲ್ಲಿ ಆತನ ಸ್ವತಃ ಊರಿಗೆ ಹತ್ತಿರದಲ್ಲಿರುವ ಗೋರಂಟ್ಲ ಎಂಬ ಊರಲ್ಲಿ ನಡೆದಿರುವ ಸಂಘಟನೆಗಳಿರುವುದರಿಂದ, ಆ ಗ್ರಂಥವನ್ನು ಆ ಪೋಲೀಸ್ ಅಧಿಕಾರಿಗೆ ಕೊಡಲು ಹೇಳಿ ಕಳಿಹಿಸಲಾಗಿದೆ. ಆಗ ಆತನು ಪೋಲೀಸ್ ಡಿಪಾರ್ಟುಮೆಂಟ್‌ನಲ್ಲಿ ಉನ್ನತ ಪದವಿಯಾದ ಡಿ.ಜಿ.ಪಿಯಾಗಿ ಇದ್ದಾನೆ. ಆತನಿಗೆ "ದೆವ್ವಗಳ–ಭೂತಗಳ ಯಥಾರ್ಥ ಸಂಘಟನೆಗಳು" ಎಂಬ ಗ್ರಂಥವನ್ನು ಕೊಟ್ಟರೆ ಆತನು "ನಿಮ್ಮ ಸ್ವಾಮಿ ಬರೆದ ಪುಸ್ತಕಗಳನ್ನು ಓದುವುದಿಲ್ಲ. ಆತನಿಗೆ ಸಂಸ್ಕೃತ ಬರುವುದಿಲ್ಲ. ಸಂಸ್ಕೃತ ಕಲಿಯದವರೆಲ್ಲರೂ ಪುಸ್ತಕಗಳು ಬರೆಯಬಾರದು. ಹಿಂದೂಮತದಲ್ಲಿ ಹದ್ದಿಲ್ಲದಂತಾಗಿದೆ. ಇಷ್ಟಬಂದವರೆಲ್ಲಾ ಸ್ವಾಮಿಗಳಾಗಿ, ಅವರ ಇಷ್ಟಬಂದಂತೆ ಪುಸ್ತಕಗಳನ್ನು ಬರೆಯುತ್ತಿದ್ದಾರೆ. ಅದೇ ಇಸ್ಲಾಮ್ ಮತದಲ್ಲಿ ಆದರೆ ಫತ್ವಾ ಬಿಡುಗಡೆ ಮಾಡಿ ಬೋಧನೆಗಳು ಹೇಳದಂತೆ ಮಾಡುತ್ತಾರೆ," ಎಂದು ಹೇಳಲಾಗಿದೆ. ನಾನು ಬ್ರಾಹ್ಮಣನು ಅಲ್ಲವೆಂದು, ನಾನು ಜ್ಞಾನ ತಿಳಿದ ವ್ಯಕ್ತಿಯಾಗಿ ಚಲಾವಣೆಯಾಗುವುದು ಇಷ್ಟವಿಲ್ಲವೆಂದು, ಆದ್ದರಿಂದಲೇ ಹಾಗೆ ಮಾತನಾಡಿದ್ದಾನೆಂದು ತಿಳಿದಿದೆ. ಒಬ್ಬ ದೊಡ್ಡ ಅಧಿಕಾರಿಯಾಗಿರುವ ವ್ಯಕ್ತಿ ಹಾಗೆ ಮಾತನಾಡುವುದು ಅವರಲ್ಲಿನ ಅಸೂಯೆ ಪೂರ್ತಿ ಹೊರಗೆ ಕಾಣಿಸಿ ದಂತಾಗಿದೆ ಸದ್ ಬ್ರಾಹ್ಮಣರಾಗಿರುವ ಕೆಲವರು ಯಾವ ಅಸೂಯೆ ಇಲ್ಲ ದವರಾಗಿರುವಾಗ, ಬಹಳಜನರು ದುಷ್ ಬ್ರಾಹ್ಮಣರು ಬ್ರಾಹ್ಮಣೇತರರಾದ ಇತರ ಕುಲದವರು ಜ್ಞಾನ ಹೇಳಬಾರದೆಂದು, ಸ್ವಾಮಿಗಳಾಗಿ ಚಲಾವಣೆ ಆಗಬಾರದೆಂದು ಅಸೂಯೆ ಹೊಂದಿದ್ದಾರೆ. ಆದ್ದರಿಂದ ಅನೇಕ ಕಡೆ ಅವರಿಂದ ದೈವಜ್ಞಾನಕ್ಕೆ ಆತಂಕ ಏರ್ಪಡುತ್ತದೆ. ಕೆಲವರು ನಮ್ಮ ಮೇಲೆ ಅಸೂಯೆಹೊಂದಿದ ದುಷ್ ಬ್ರಾಹ್ಮಣರು, ವಿಶ್ವಹಿಂದೂಪರಿಷತ್ ನಂತಹ ಕೆಲವು ಹಿಂದೂಸಂಸ್ಥೆಗಳಲ್ಲಿ ಇದ್ದು ಹಿಂದೂ ಮತವು ಕ್ಷೀಣಿಸಿಹೋಗುತ್ತದೆ ಎಂದು, ಅದಕ್ಕೆ ಕಾರಣ ನಮ್ಮಂತವರೆಂದು

ಪ್ರಚಾರ ಮಾಡಿ, ಮತವನ್ನು ಅಡ್ಡವಿಟ್ಟು ಏನು ತಿಳಿಯದ ಇತರ ಕುಲದವರನ್ನು ನಮ್ಮ ಮೇಲೆ ಹುರಿದುಂಬಿಸಿ, ದಾಳಿಮಾಡಲು ಕಳುಹಿಸುತ್ತಿದ್ದಾರೆ. ಸ್ವಲ್ಪ ಮಟ್ಟಿನ ಜ್ಞಾನವೂ ಸಹ ಇಲ್ಲದವರು ಹಿಂದೂ ಧರ್ಮಗಳನ್ನು ಸಿದ್ಧೀಕರಿಸಿ ಬೋಧಿಸುವ ಒಬ್ಬ ಸಿದ್ಧಾಂತ ಕರ್ತನನ್ನೇ ಅವಮಾನಿಸಿದರೆ, ಹಿಂದೂಮತವು ಹೇಗೆ ವೃದ್ಧಿಯಾಗುತ್ತದೆ? ಹಿಂದೂ ಮತಕ್ಕೆಲ್ಲವೂ ಜೀವಿಸಿರುವ ಸಿದ್ಧಾಂತ ಕರ್ತನು ನಾನು ಒಬ್ಬನೇ. ಹಿಂದೂಗಳ ಧರ್ಮಗಳನ್ನು ಕುರಿತು, ಅಧರ್ಮಗಳನ್ನು ಕುರಿತು ಹೇಳಬೇಕಾದ ಕರ್ತವ್ಯ ನಮಗಿರುವಾಗ, ಆತ್ಮಜ್ಞಾನ ಏನೂ ತಿಳಿಯದವರು ನಮ್ಮನ್ನು ವಿಮರ್ಶಿಸುವುದು ಸರಿಯಾದ ಕೆಲಸವೇನಾ ಎಂದು ಕೇಳುತ್ತಿದ್ದೇವೆ.

ಸಂಸ್ಕೃತ ಕಲಿಯದವರು ಸ್ವಾಮಿಗಳು ಹೇಗಾಗುತ್ತಾರೆಂದು ಕೇಳಿದವರಿಗೆ ನಾವು ಹೇಳುವುದೇನೆಂದರೆ! ಒಬ್ಬ ಮನುಷ್ಯನಲ್ಲಿ ಭಾವವನ್ನು ತಿಳಿಸುವುದು ಭಾಷೆ. ಯಾವಕಡೆ ನೋಡಿದರು ಭಾವಕ್ಕೆ ಬೆಲೆ ಇದೆ, ಆದರೆ ಭಾಷೆಗೆ ಸ್ವಲ್ಪವೂ ಸಹ ಬೆಲೆ ಇಲ್ಲ. ಭಾವವನ್ನು ವ್ಯಕ್ತ ಮಾಡದಿರುವುದು ಭಾಷೆಯಲ್ಲ. ಭಾವನೆಯಲ್ಲಿ ಒಳ್ಳೆಯ ಕೆಟ್ಟ ಭಾವನೆಗಳಿರಬಹುದು. ಅಷ್ಟೇಯಾಗಲಿ ಭಾಷೆಯಲ್ಲಿ ಒಳ್ಳೆಯ ಕೆಟ್ಟ ಭಾಷೆಗಳಿರುವುದಿಲ್ಲ. ಎಲ್ಲ ಶಬ್ದಗಳನ್ನು ಹೇಳುವುದಕ್ಕೆ ಹೆಚ್ಚಾಗಿ ಅಕ್ಷರಗಳು ಹೊಂದಿರುವುದು ತೆಲುಗು ಭಾಷೆಯೆ. ಆದ್ದರಿಂದ ಬಹಳಜನರು ದೇಶಭಾಷೆ ಗಳಲ್ಲಿ ತೆಲುಗು ಲೆಸ್ಸ ಎಂದಿದ್ದಾರಾಗಲಿ ಸಂಸ್ಕೃತ ಲೆಸ್ಸ ಎಂದು ಯಾರೂ ಅನ್ನಲಿಲ್ಲ? ಅಂತಹದರಲ್ಲಿ ಸಂಸ್ಕೃತ ಭಾಷೆಯನ್ನು ಕುರಿತು ಹೇಳಬೇಕಾದ ಅವಶ್ಯಕತೆ ಏನು ಬಂದಿದೆ? ಸಂಸ್ಕೃತ ಭಾಷೆಗೂ ದೇವರ ಜ್ಞಾನಕ್ಕೂ ಸಂಬಂಧ ಇರುವಂತೆ ಎಲ್ಲಿಯೂ ಕಾಣಿಸಲಿಲ್ಲ. ಸಂಸ್ಕೃತ ಲಿಪಿಯಿಲ್ಲದ ಕೊರಸರು (ಎರುಕುಲ), ಲಂಬಾಣಿ (ಸುಗಾಲಿ), ಭಾಷೆಯಂತಹದ್ದು. ನಮ್ಮದೇಶದಲ್ಲಿ ಕರ್ನಾಟಕ ರಾಷ್ಟ್ರದಲ್ಲಿಯೂ ಪುನಃ ಕೆಲವು ಕಡೆಯಲ್ಲಿ ಸಂಸ್ಕೃತವನ್ನು ಬಳಕೆಯ ಭಾಷೆಯಾಗಿ ಮಾತನಾಡುವವರಿದ್ದಾರೆ. ಕೆಲವರು ಮನೆಯಲ್ಲಿ ಸಂಸ್ಕೃತವನ್ನೇ ಮಾತನಾಡುತ್ತಿದ್ದಾರೆ. ಧಾರಾಳವಾಗಿ ಸಂಸ್ಕೃತವನ್ನು ಮಾತನಾಡುವವರು

ಜ್ಞಾನವೇನು ತಿಳಿಯದವರಾಗಿದ್ದಾರೆ ಅಲ್ಲವೆ! ಕೆಲವರು ತಮ್ಮಲ್ಲಿನ ಅಸೂಯೆ ಗುಣದಿಂದ ಮನುಷ್ಯರಲ್ಲಿ ನಾವು ಹೊರತು ಯಾರು ಪೂಜ್ಯರಾಗಿ ಇರಬಾರದೆಂಬ ಭಾವನೆಯಿಂದ ಒಂದು ಹಿಂದೂಗಳಲ್ಲಿಯೇ ನೀವು ಬೇರೆ, ನಾವು ಬೇರೆ ಎಂಬ ಭಾವವನ್ನು ತೋರಿಸುವುದರಿಂದ, ಉಳಿದವರನ್ನು ಅಂಟಬಾರದವರಂತೆ ಮಾತನಾಡುವುದರಿಂದ, ಹಿಂದೂಗಳಲ್ಲಿ ವಿವಕ್ಷವನ್ನು ನೋಡಲಾರದೆ ಬಹಳ ಜನರು ಹಿಂದೂಗಳು, ಅಂಟಬಾರದತನವು ಇಲ್ಲದ ಇತರ ಮತದೊಳಗೆ ಹೋಗಿದ್ದಾರೆ. ಬ್ರಾಹ್ಮಣರಲ್ಲಿ ಕೆಲವರು ಅಸೂಯೆಪರರು ಇರುವವರೆಗೂ ಹಿಂದೂಮತವು ಕ್ಷೀಣಿಸುವುದಕ್ಕೆ ಅವಕಾಶ ಇದೆ.

ಬ್ರಾಹ್ಮಣರಲ್ಲಿ ಬ್ರಹ್ಮಜ್ಞಾನ ಹೊಂದಿದವರು, ಬ್ರಹ್ಮಜ್ಞಾನ ಇಲ್ಲದವರು ಎಂದು ಎರಡು ವಿಧದವರಿದ್ದಾರೆ. ಬ್ರಹ್ಮಜ್ಞಾನ ಇರುವವರು ಬಹಳ ಕಡಿಮೆಜನ ಇರುವಾಗ, ಬ್ರಹ್ಮಜ್ಞಾನ ಇಲ್ಲದವರು ಬಹಳಜನ ಇದ್ದಾರೆ. ಬ್ರಹ್ಮಜ್ಞಾನದ ಮೇಲೆ ಆಸಕ್ತಿ, ಭಕ್ತಿ ಇರುವ ಸ್ವಲ್ಪಜನ ಸದ್ ಬ್ರಾಹ್ಮಣರು ನಮ್ಮ ಬೋಧನೆಗಳನ್ನು ಪವಿತ್ರವಾಗಿ ಕೇಳುತ್ತಾ ಎಷ್ಟೋ ಜ್ಞಾನವನ್ನು ಸಂಪಾದಿಸಿಕೊಂಡವರು ಸಹ ಇದ್ದಾರೆ. ಅಂತಹವರು ವ್ಯಾಸನಂತೆ ಬದಲಾಗಿ, ವ್ಯಾಸನು ಕೃಷ್ಣನ ಜ್ಞಾನ ಉತ್ತಮವಾದುದೆಂದು ಗ್ರಹಿಸಿದಂತೆ, ಇವರೂ ಸಹ ವೇದಗಳನ್ನು, ಯಜ್ಞಗಳನ್ನು ಅಧರ್ಮಗಳೆಂದು ತಿಳಿದು, ನಾವು ಹೇಳಿದ ಜ್ಞಾನವನ್ನೇ ಆಶ್ರಯಿಸಿ, ನಮ್ಮನ್ನು ಎಷ್ಟೋ ಪೂಜ್ಯಭಾವದಿಂದ ನೋಡುತ್ತಿದ್ದಾರೆ. ಬ್ರಾಹ್ಮಣರಲ್ಲಿ ಕೆಲವರು ಎಷ್ಟೋ ಸಭ್ಯತೆಯಿಂದ ಇರುವಾಗ, ಬಹಳಜನರು ನಮಗಿಂತ ಇತರರು ದೊಡ್ಡವರಲ್ಲ ಎಂಬ ಭಾವನೆಯಲ್ಲಿದ್ದಾರೆ. ಅಂತಹವರು ಘೋರವಾದ ಪಾಪಕ್ಕೆ ಗುರಿ ಯಾಗುತ್ತಾರೆಂದು ಹೇಳುತ್ತಿದ್ದೇವೆ. ದೇವರ ವಿಷಯದಲ್ಲಿ ಜ್ಞಾನಿಗಳ ಮೇಲೆ ಅಸೂಯೆ ಹೊಂದಿರುವವರು ಈಗಲೇ ಎಷ್ಟೋ ವಿಧಗಳು ಕೆಟ್ಟುಹೋಗಿದ್ದಾರೆ. ನೂರು ವರ್ಷಗಳ ಹಿಂದಕ್ಕೆ ಹೋಗಿ ನೋಡಿದರೆ ಆ ದಿನ ಬ್ರಾಹ್ಮಣರು ಎಲ್ಲರಿಗಿಂತ ಸುಖವಾಗಿ ಬದುಕುತ್ತಿದ್ದರು. ಭೂಮಿಗಳೆಲ್ಲ ಅವರ ಹೆಸರಿನಲ್ಲಿ ಇರುತ್ತಿದ್ದವು. ಈದಿನ ಅವರಿಗಿರುವ ಭೂಮಿಗಳು ಹೋಗಿವೆ. ಹಾಗೆಯೇ

ಸುಖಗಳು ಹೋಗಿ. ಎಷ್ಟೋ ಕುಟುಂಬಗಳು ಬಡವರಾಗಿದ್ದಾರೆ. ಇದಕ್ಕೆಲ್ಲ ಕಾರಣ ದೇವರ ವಿಷಯದಲ್ಲಿ, ಜ್ಞಾನಿಗಳ ವಿಷಯದಲ್ಲಿ, ಇತರರ ಮೇಲೆ ಅಸೂಯ ಹೊಂದಿರುವುದರಿಂದ ಹಾಗಾಗಿದೆ ಎಂದುಕೊಳ್ಳುತ್ತೇವೆ. ದೇವರ ವಿಷಯದಲ್ಲಿ ಕಿರಿಕಿರಿಗಳು, ಕುತಂತ್ರಗಳು ಮಾಡುವವರು ಯಾರಾದರೂ ಅಧೋಗತಿ ಪಾಲಾಗದೆ ತಪ್ಪುವುದಿಲ್ಲ.

ವಿಶ್ವವೆಲ್ಲವೂ ದೇವರಿಂದ ಸೃಷ್ಟಿಸಲ್ಪಟ್ಟಿದೆ. ಆದ್ದರಿಂದ ವಿಶ್ವವೆಲ್ಲದಕ್ಕೂ ಸೃಷ್ಟಿಕರ್ತ ದೇವರು ಒಬ್ಬನೇ. ಸೃಷ್ಟ್ಯಾದಿಯಿಂದ ಭೂಮಿ ಮೇಲೆ ಹಿಂದೂ (ಇಂದೂ) ಧರ್ಮವೇ ಇತ್ತು. ಇಂದೂಧರ್ಮವನ್ನು ಸೃಷ್ಟ್ಯಾದಿಯಲ್ಲಿಯೇ ಮನುಷ್ಯರಿಗೆ ದೇವರು ತಿಳಿಸಿದ್ದಾನೆ. ಜಗತ್ತು ಹುಟ್ಟಿ ಎಷ್ಟೋ ಕಾಲವಾಗಿದೆ. ಕಾಲಕ್ರಮದಲ್ಲಿ ಎಷ್ಟೋ ಬದಲಾವಣೆಗಳು ಬಂದಿವೆ. ಕೊನೆಗೆ ದೇವರು ಹೇಳಿದ ಧರ್ಮಗಳನ್ನು ಸಹ ಮನುಷ್ಯ ಬದಲಾಯಿಸಿಕೊಂಡಿದ್ದಾನೆ. ಆದಿಯಲ್ಲಿ ದೈವಜ್ಞಾನ ಎಂಬ ಅರ್ಥವನ್ನು ಕೊಡುವ ಇಂದೂ ಶಬ್ಧವನ್ನು, ಯಾವ ಅರ್ಥವಿಲ್ಲದ ಹಿಂದೂಶಬ್ದವಾಗಿ ಬದಲಾಯಿಸಿಕೊಂಡಿದ್ದಾರೆ. ಧರ್ಮಗಳನ್ನೂ, ಧರ್ಮ ಗಳಿಗಿರುವ ಹೆಸರನ್ನೂ ಬದಲಾಯಿಸಿಕೊಳ್ಳುವುದೆ ಅಲ್ಲದೆ ಮಾರ್ಗ ಎನ್ನುವ ಅರ್ಥ ಕೊಡುವ 'ಪಥ' ಎಂಬ ಪದವನ್ನು 'ಮತ' ಎಂಬ ಪದವಾಗಿ ಬದಲಾಯಿಸಿಕೊಂಡಿದ್ದಾನೆ. ಅದರ ನಂತರ ಹೊಸ ಮತಗಳನ್ನು ಸಹ ಸೃಷ್ಟಿಸಿಕೊಂಡಿದ್ದಾನೆ. ಈ ವಿಧವಾಗಿ ಮನುಷ್ಯ ಧರ್ಮವನ್ನು ಬದಲಾಯಿಸಿ ಕೊಂಡರೂ, ಧರ್ಮದ ಹೆಸರು ಬದಲಾಯಿಸಿದರೂ, ಕೊನೆಗೆ ಪಥವನ್ನು ಮತಗಳಾಗಿ ಬದಲಾಯಿಸಿಕೊಂಡರೂ, ಮನುಷ್ಯನನ್ನು ಸೃಷ್ಟಿಸಿದ ದೇವರು ಬದಲಾಗಲಿಲ್ಲ. ಹಾಗೆಯೇ ಸೃಷ್ಟಿಸಲ್ಪಟ್ಟ ಮನುಷ್ಯ ಬದಲಾಗಲಿಲ್ಲ. ಮನುಷ್ಯ ಯಾವ ಮತದಲ್ಲಿ ಇದ್ದರೂ ಹಸಿವು ತಪ್ಪುವುದಿಲ್ಲ, ಬಾಯಾರಿಕೆಯೂ ತಪ್ಪುವುದಿಲ್ಲ. ಹಾಗೆ ಸಾವು ತಪ್ಪುವುದಿಲ್ಲ, ಹುಟ್ಟುವುದು ತಪ್ಪುವುದಿಲ್ಲ, ಯಾವ ಬದಲಾವಣೆ ಇಲ್ಲದಿರುವಾಗ ಮನುಷ್ಯ ಹೊಸ ಹೊಸ ಹೆಸರುಗಳನ್ನು ತನ್ನ ಮತಕ್ಕೆ, ತನ್ನ ಧರ್ಮಕ್ಕೆ ಏಕೆ ಇಟ್ಟುಕೊಳ್ಳಬೇಕು? ಎಂದು ಪ್ರಶ್ನಿಸಿಕೊಂಡರೆ ಮನುಷ್ಯ ತನ್ನ ಅಜ್ಞಾನದಿಂದ ಹಾಗೆ ಮಾಡಿಕೊಂಡಿದ್ದಾನೆಂದು ತಿಳಿಯುತ್ತದೆ.

ಮನುಷ್ಯ ತನ್ನ ಅಜ್ಞಾನವನ್ನು ಬಿಟ್ಟು ಹಿಂತಿರುಗಿ ಜ್ಞಾನದ ಪ್ರಕಾರ ನೋಡಿಕೊಂಡರೆ ಯಾವ ಮತಸ್ಥನಿಗಾದರೂ, ಯಾವ ಕುಲಸ್ಥನಿಗಾದರೂ, ಯಾವ ದೇಶಸ್ಥನಿಗಾದರೂ ದೇವರು ಒಬ್ಬನೇ, ದೇವರ ಧರ್ಮವನ್ನು ತಿಳಿಸುವ ಜ್ಞಾನವೂ ಒಂದೇ ಎಂದು ತಿಳಿಯುತ್ತದೆ. ದೇವರು ಒಬ್ಬ ಮನುಷ್ಯನ ಮೇಲೆ ಎಷ್ಟು ಅಧಿಕಾರ ಹೊಂದಿದ್ದಾನೋ, ಅಷ್ಟೇ ಅಧಿಕಾರ ಯಾವ ಮನುಷ್ಯನ ಮೇಲಾದರು ಹೊಂದಿದ್ದಾನೆ. ದೇವರ ದೃಷ್ಟಿಯಲ್ಲಿ ಮತಗಳು, ಕುಲಗಳು ಇಲ್ಲ. ಆದ್ದರಿಂದ ಎಲ್ಲ ಕುಲದವರಿಗೂ, ಎಲ್ಲ ಮತದವರಿಗೂ ದೇವರು ಒಬ್ಬನೆ, ಹಾಗೆಯೇ ದೇವರನ್ನು ತಿಳಿದುಕೊಳ್ಳುವ ಧರ್ಮವೂ ಒಂದೇ, ಆದ್ದರಿಂದ ಎಲ್ಲ ಮತಗಳ ಮೂಲ ಗ್ರಂಥಗಳಲ್ಲಿ ಒಬ್ಬನೇ ದೇವರು, ಒಂದೇ ಜ್ಞಾನ, ಒಂದೇ ಧರ್ಮ ಇರುವಂತೆ ದೇವರು ಮಾಡಿದ್ದಾನೆ. ದೇವರಿಗೆ ತಿಳಿಯದಂತೆ ಏನು ನಡೆಯುವುದಿಲ್ಲ. ಮನುಷ್ಯ ಅಜ್ಞಾನದಿಂದ ಬೇರೆ ಬೇರೆ ಮತಗಳನ್ನು ಸೃಷ್ಟಿಸಿಕೊಂಡರೂ, ಅದರಲ್ಲಿಯೂ ಸಹ ದೇವರು, ದೇವರ ಧರ್ಮವು ಬದಲಾಗದಂತೆ ಅವರಿಗೆ ಗ್ರಂಥಗಳನ್ನು ತಯಾರು ಮಾಡಿಕೊಟ್ಟಿದ್ದಾನೆ. ದೇವರೂ ಒಬ್ಬನೇ, ದೇವರ ಜ್ಞಾನವೂ ಒಂದೇ, ಮನುಷ್ಯ ಒಬ್ಬನೇ ಆದರೂ, ಒಂದು ಮತದಲ್ಲಿನ ಜ್ಞಾನವನ್ನೂ, ಧರ್ಮವನ್ನೂ ತಿಳಿದುಕೊಂಡರೆ, ಅದೇ ಎಲ್ಲ ಮತಗಳಲ್ಲಿಯೂ ಇರುವಂತೆ ತಿಳಿಯುತ್ತದೆ. ಹಾಗಲ್ಲದೆ ಜ್ಞಾನದೃಷ್ಟಿ ಇಲ್ಲದಂತೆ ಯಾವ ಮತಗ್ರಂಥವನ್ನು ಓದಿದರೂ ಅದು ಬೇರೆ ಮತವಾಗಿ, ಅದಕ್ಕೆ ಬೇರೆ ದೇವರಿರುವಂತೆ ತಿಳಿಯುತ್ತದೆ. ಜ್ಞಾನದೃಷ್ಟಿ ಇಲ್ಲದವನು ಗ್ರಂಥದೊಳಗಿರುವುದನ್ನು ಗ್ರಹಿಸಲಾರನು, ದೈವವನ್ನು ಸೇರಲಾರನು. ನಿಜವಾದ ಜ್ಞಾನದೃಷ್ಟಿ ಹೊಂದಿದವನು ಯಾವ ಮತದಲ್ಲಿ ಹುಟ್ಟಿದ್ದರೂ, ಆ ಮತದಲ್ಲಿನ ಗ್ರಂಥವನ್ನು ನೋಡಿದಾಗ ದೇವರ ಧರ್ಮವನ್ನು ತಿಳಿಯುವುದರಿಂದ, ಎಲ್ಲ ಮತದಲ್ಲಿರುವ ಜ್ಞಾನವು ಸುಲಭವಾಗಿ ತಿಳಿಯುತ್ತದೆ.

ಇಂದೂ ಧರ್ಮದಲ್ಲಿ ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿ ತ್ರೈತ ಸಿದ್ಧಾಂತ ಆದಿಕರ್ತ ಎಂದು ಹೆಸರುಹೊಂದಿದ ನಾನು ಭಗವದ್ಗೀತೆಯನ್ನು ಓದಿದ್ದೇನೆ. ನಂತರ ಖುರಾನ್ ಗ್ರಂಥವನ್ನು ಓದಿದ್ದೇನೆ. ಆ ನಂತರ ಬೈಬಲ್ ಗ್ರಂಥವನ್ನೂ

ಸಹ ಓದಿದ್ದೇನೆ. ಭಗವದ್ಗೀತೆಯಲ್ಲಿ ಸಾವು ಹುಟ್ಟುಗಳಿವೆ ಎಂದು ಹೇಳಲಾಗಿದೆ. ಆದರೆ ಮುಸ್ಲಿಮ್‌ರು, ಇಸ್ಲಾಮ್ ಧರ್ಮದಲ್ಲಿ ಸಾವು ಇದೆ, ಆದರೆ ಹುಟ್ಟುವುದು ಇಲ್ಲ ಎನ್ನುತ್ತಿದ್ದಾರೆ. ಖುರಾನ್ ಗ್ರಂಥದಲ್ಲಿ, ಭಗವದ್ಗೀತೆಯಲ್ಲಿರುವ ಧರ್ಮಗಳ ಜ್ಞಾನವೇ ಬರೆದು, ಅಲ್ಲಿಯೂ ಸಹ ಸಾವು ಹುಟ್ಟುಗಳಿವೆ ಎಂದು ಹೇಳಲಾಗಿದೆ. ಅದೇ ವಿಷಯವನ್ನು ಬೈಬಲ್ ಗ್ರಂಥದಲ್ಲಿಯೂ ಸಹ ಹೇಳಲಾಗಿದೆ. ಮೂರು ಗ್ರಂಥಗಳಲ್ಲಿ ಒಂದೇ ಜ್ಞಾನವಿರುವಾಗ, ಒಂದು ಮತದಲ್ಲಿರುವ ಪುನರ್ಜನ್ಮಗಳು ಇನ್ನೊಂದು ಮತದಲ್ಲಿ ಏಕೆ ಇಲ್ಲ ಅನ್ನುತ್ತಿದ್ದಾರೆಂದು ನೋಡಿದರೆ, ಅವರಿಗೆ ಜ್ಞಾನದೃಷ್ಟಿ ಇಲ್ಲದಿರುವುದರಿಂದ ಅವಗಾಹನಾಲೋಪ ಏರ್ಪಟ್ಟು ಹಾಗೆ ಹೇಳುತ್ತಿದ್ದಾರೆಂದು, ಇರುವ ವಿಷಯವನ್ನು ಅರ್ಥಮಾಡಿಕೊಳ್ಳದೆ ಹಾಗೆ ಹೇಳುತ್ತಿದ್ದಾರೆಂದು ಅರ್ಥವಾಗಿದೆ. ಉದಾಹರಣೆಗೆ ಒಬ್ಬ ವಿದ್ಯಾರ್ಥಿ ರಜಾದಿನಕ್ಕೆ ಇಂಗ್ಲೀಷ್ ಭಾಷೆಯಲ್ಲಿ ಕಲಿಯುವುದಕ್ಕೆ ಆ ಪದದ ಅಕ್ಷರಗಳನ್ನು ನಿಧಾನವಾಗಿ ಹಾ,ಲಿ,ಡೆ ಎಂದು ಹೇಳುತ್ತಿದ್ದನು ನಂತರ ಸ್ವಲ್ಪ ಸಮಯಕ್ಕೆ ಅದೇ ಅಕ್ಷರಗಳನ್ನೇ ವೇಗವಾಗಿ ಹೇಳಲು ಪ್ರಾರಂಭಿಸಿದನು. ವೇಗವಾಗಿ ಹೇಳುವುದರಿಂದ ಅವರ ಮನೆಯಲ್ಲಿನ ತಾಯಿಗೆ ಆ ಮಾತು ಕೇಳಿಸುತ್ತಿತ್ತು. ಹೇಳುವವನು ಹಾ,ಲಿ,ಡೆ ಎಂಬ ಉದ್ದೇಶದಿಂದ ಹೇಳುತ್ತಿದ್ದರು ಅವರ ತಾಯಿಗೆ ಓದುತ್ತಿರುವವನು ರಜಾದಿನದ ಬಗ್ಗೆ ಆಂಗ್ಲ ಪದವನ್ನು ಕಲಿತುಕೊಳ್ಳುತ್ತಿದ್ದೇನೆಂಬ ಉದ್ದೇಶದಿಂದ ಇರದೆ, ಕೇಳುವ ತಾಯಿಗೆ ಹಾಲನ್ನು ಕುರಿತು ಮಗ ಅಮ್ಮ ಹಾಲಿಡೆ ಎಂದು ಹೇಳುತ್ತಿರುವಂತೆ ಅರ್ಥವಾಗಿದೆ. ಇಲ್ಲಿ ಓದುವವನ ಉದ್ದೇಶ ಒಂದಾದರೆ ಕೇಳುವವರ ಉದ್ದೇಶ ಬೇರೆಯಾಗಿದೆ ಅಲ್ಲವೆ! ಹಾಗೆಯೇ ಒಂದೇ ಜ್ಞಾನ ಬೇರೆ ಬೇರೆ ಗ್ರಂಥಗಳಲ್ಲಿ ಇದ್ದರೂ, ಅವಗಾಹನೆಯಲ್ಲಿ ಒಬ್ಬೊಬ್ಬರದು ಒಂದೊಂದು ದಾರಿಯಾಗಿ ಬದಲಾದಂತೆ, ಒಂದೇ ಜ್ಞಾನವನ್ನೇ ಬೇರೆ ಬೇರೆ ಭಾವನೆಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ನಾನು ಮೂರು ಮೂಲ ಗ್ರಂಥಗಳನ್ನು ಓದಿದ್ದೇನೆ. ಬೈಬಲ್, ಖುರಾನ್‌ನಲ್ಲಿಯೂ ಸಹ ಭಗವದ್ಗೀತೆಯಲ್ಲಿರುವ ಭಾವನೆಗಳೇ ಇವೆ. ಆ ಗ್ರಂಥಗಳು ನನಗರ್ಥವಾದಂತೆ ಆಯಾ ಮತಗಳಲ್ಲಿ ಜ್ಞಾನಿಗಳೆಂದುಕೊಂಡವರಿಗೂ ಸಹ ಅರ್ಥವಾಗಲಿಲ್ಲ. ಎಲ್ಲ ಧರ್ಮಗಳು ಒಂದೇ

ಆದ್ದರಿಂದ ಅವು ನನಗೆ ಸುಲಭವಾಗಿವೆ. ಅದರಲ್ಲಿ ನಾನು ಪ್ರಶ್ನೆಯನ್ನು ಕೇಳಿದರೆ ಅವರ ಗ್ರಂಥಗಳೇ ಅವರಿಗೆ ಸರಿಯಾಗಿ ಅರ್ಥವಾಗದಿರುವುದರಿಂದ ಆಯಾ ಮತದವರು ಸರಿಯಾದ ಸಮಾಧಾನ ಹೇಳಲಾರದೆ ಕಂಗೆಡುತ್ತಿದ್ದಾರೆ. ಎಲ್ಲರದು ಒಂದೇ ಜ್ಞಾನವೆಂದು ತಿಳಿಯದಿರುವುದರಿಂದ, ಅವರು ಕೆಲವುಕಡೆ ಬೇರೆ ಭಾವನೆ ಗಳಿರುವಂತೆ ಪ್ರಚಾರ ಮಾಡಿಕೊಂಡಿದ್ದಾರೆ.

ಭೂಮಿ ಮೇಲೆ ಮನುಷ್ಯರು ಕುಲಗಳಾಗಿ ಮತಗಳಾಗಿ ಸೀಳಿಹೋಗಿ, ಕುಲ ಭೇದಗಳು, ಮತಭೇದಗಳು ಬೆಳೆಸಿಕೊಂಡು, ಮತಕ್ಕೆ ದೇವರು ಬೇರೆ, ಕುಲಕ್ಕೆ ಪೂಜೆಬೇರೆ ಎಂದುಕೊಂಡು, ಬೇರೆ ಬೇರೆ ದೇವರುಗಳನ್ನು ಆಶ್ರಯಿಸಿ, ಬೇರೆ ಬೇರೆ ಪೂಜೆಗಳು ಮಾಡಿದರೂ ಏನು ಪ್ರಯೋಜನೆ ಇರುವುದಿಲ್ಲ. ಯಾವ ಮತದವರಾದರೂ ದೇವರು ಹೇಳಿದ ಧರ್ಮಗಳ ಪ್ರಕಾರ ನಡೆದುಕೊಂಡಾಗಲೇ ಅವರಿಗೆ ಮುಕ್ತಿ ಲಭಿಸುತ್ತದೆ. ದೇವರು ಯಾರೊ ತಿಳಿದುಕೊಳ್ಳುವುದಕ್ಕೆ ಅಗತ್ಯವಾದ ಧರ್ಮಗಳನ್ನು ದೇವರೆ ಅನೇಕ ಬಾರಿ ಹೇಳಿದಂತೆ ತಿಳಿದರೂ, ನನಗೆ ಮಾತ್ರ ದ್ವಾಪರಯುಗದಲ್ಲಿ ದೇವರು ಭಗವಂತನಾಗಿ ಬಂದ ಕೃಷ್ಣನು ತನ್ನ ಧರ್ಮಗಳನ್ನು ತಿಳಿಸಿದಂತೆ ಸಾಕ್ಷ್ಯಾಧಾರಗಳಿಂದ ಸಹ ತಿಳಿದಿದೆ. ಆಗ ಹೇಳಿರುವುದನ್ನೇ ಭಗವದ್ಗೀತೆ ರೂಪದಲ್ಲಿ ವ್ಯಾಸನು ಬರೆದು ನಮಗೆ ಕೊಟ್ಟಿದ್ದಾನೆ. ಭಗವದ್ಗೀತೆ ಏಳುನೂರು ಶ್ಲೋಕಗಳ ರೂಪದಲ್ಲಿ ಇದ್ದರೂ, ಅದರಲ್ಲಿ ಎಷ್ಟೋ ಜ್ಞಾನ ವಿವರಗಳಿದ್ದರೂ, ಧರ್ಮಗಳ ವಿಷಯಕ್ಕೆ ಬಂದರೆ ಮೂರು ಧರ್ಮಗಳನ್ನು, ನಾಲ್ಕು ಅಧರ್ಮಗಳನ್ನು ತಿಳಿಸಿದಂತೆ ಕಾಣಿಸುತ್ತದೆ. ಇಲ್ಲಿಯವರೆಗೂ ಭಗವದ್ಗೀತೆಯನ್ನು ಓದಿದ ಎಷ್ಟೋ ಜನ ಪಂಡಿತರು ಸಹ ಹೇಳಿದ ಮೂರು, ನಾಲ್ಕು ಎಂಬ ಮಾತನ್ನು ನೀವು ಹೇಗೆ ಹೇಳುತ್ತಿದ್ದೀರೆಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ಉತ್ತರ ಏನೆಂದರೆ!

ನೀರಿನಲ್ಲಿನ ಮೊಸಳೆಗೆ ನಾಲಿಗೆ ಇರುವುದಿಲ್ಲ. ಅದು ತನ್ನ ಆಹಾರವಾದ ಮಾಂಸವನ್ನು ಎಷ್ಟು ತಿಂದರೂ ಆ ಮಾಂಸದ ರುಚಿ ಅದಕ್ಕೆ ತಿಳಿಯುವುದಿಲ್ಲ. ಮೊಸಳೆ ಎಷ್ಟು ತಿಂದರೂ ಅದರ ಹೊಟ್ಟೆ ತುಂಬಬೇಕೇ ಹೊರತು, ತಿಂದ

ಆಹಾರದ ರುಚಿ ಸ್ವಲ್ಪವೂ ಸಹ ಅದಕ್ಕೆ ತಿಳಿಯುವುದಿಲ್ಲ. ಅದೇ ವಿಧವಾಗಿ ಕೆಲವರು ನಾಲಿಗೆ ಇಲ್ಲದ ಮೊಸಳೆಯಂತವರು ಎಷ್ಟು ಓದಿದರೂ ಅವರಿಗೆ ಓದಿದ್ದೇವೆಂಬ ತೃಪ್ತಿ ಹೊರತು ಓದಿದ ಓದಿನಲ್ಲಿನ ಸಾರಾಂಶ ತಿಳಿಯುವುದಿಲ್ಲ. ಅದೇ ವಿಧವಾಗಿ ಭಗವದ್ಗೀತೆಯಲ್ಲಿನ ರುಚಿ ಇಂದೂಗಳಿಗೂ, ಖುರಾನ್‌ನಲ್ಲಿನ ರುಚಿ ಮುಸ್ಲಿಮರಿಗೂ, ಬೈಬಲ್‌ನಲ್ಲಿನ ರುಚಿ ಕ್ರೈಸ್ತರಿಗೆ ತಿಳಿಯುವುದಿಲ್ಲ. ಆದ್ದರಿಂದ ಅವುಗಳಲ್ಲಿನ ಧರ್ಮಗಳು, ಅಧರ್ಮಗಳು ಅವರಿಗೆ ತಿಳಿಯದಂತಾಗಿವೆ. ಮನುಷ್ಯರಲ್ಲಿ ನಾಲಿಗೆ ಇಲ್ಲದ ಮೊಸಳೆಯಂತೆ ಅಲ್ಲದೆ, ಕೆಲವರು ನಾಲಿಗೆ ಇರುವ ಕಪ್ಪೆಯಂತೆ ಸಹ ಇರುತ್ತಾರೆ. ಕಪ್ಪೆ ಗೇಣು ದೂರದಲ್ಲಿರುವ ಹುಳವನ್ನಾಗಲಿ, ನೊಣವನ್ನಾಗಲಿ ತನ್ನ ನಾಲಿಗೆಯಿಂದ ಅಮಿತವಾದ ವೇಗದಿಂದ ಬಾಯೊಳಗೆ ಸೆಳೆದುಕೊಳ್ಳುತ್ತದೆ. ಕಪ್ಪೆ ಬಾಯಿಂದ ನಾಲಿಗೆ ಹೊರಗೆ ಬಂದು ಗೇಣು ದೂರವಾಗಿ ಸಾಗಿ ಹುಳವನ್ನು ಮುಟ್ಟುತ್ತದೆ. ಆಗ ಕಪ್ಪೆ ನಾಲಿಗೆಗಿರುವ ಜಿಗುರಿಗೆ ಹುಳ ಅಂಟಿಕೊಳ್ಳುತ್ತದೆ. ಆಗ ನಾಲಿಗೆಯನ್ನು ಕಪ್ಪೆ ಮುದುಡಿಕೊಳ್ಳುವುದರಿಂದ ಹುಳ ಕಪ್ಪೆಯ ಬಾಯೊಳಗೆ ನಾಲಿಗೆಗೆ ಅಂಟಿಕೊಂಡುಬಂದು ಬೀಳುತ್ತದೆ. ಈ ಕೆಲಸ ಎಲ್ಲವೂ ಯಾರಿಗೂ ಕಾಣಿಸದಷ್ಟು ವೇಗವಾಗಿ ನಡೆದುಹೋಗುತ್ತದೆ. ಆದರೆ ಕಪ್ಪೆಯ ನಾಲಿಗೆ ಆಹಾರವನ್ನು ಸೆಳೆದುಕೊಳ್ಳುವುದಕ್ಕೇ ಆಗಲಿ ರುಚಿ ನೋಡುವುದಕ್ಕೆ ಉಪಯೋಗಪಡುವುದಿಲ್ಲ. ಮೊಸಳೆ ಹೇಗಾದರೆ ಆಹಾರವನ್ನು ಅಗೆದು ನುಂಗದಂತೆ ಅತಿವೇಗವಾಗಿ ಹೇಗೆ ನುಂಗಿಹಾಕುತ್ತಿದೆಯೋ, ಹಾಗೆಯೇ ಕಪ್ಪೆಯೂ ಸಹ ಸಿಕ್ಕಿರುವುದನ್ನು ಸಿಕ್ಕಿದಂತೆ ನುಂಗಿಹಾಕುತ್ತದೊ. ಮೊಸಳೆಗೆ ಹೇಗೆ ರುಚಿ ತಿಳಿಯುವುದಿಲ್ಲವೋ, ಕಪ್ಪೆಗೂ ಸಹ ಹಾಗೆ ರುಚಿ ತಿಳಿಯುವುದಿಲ್ಲ. ಆದರೆ ಆಹಾರದ ಹತ್ತಿರಕ್ಕೆ ಹೋಗುವವರೆಗೂ ಮೊಸಳೆ ಆಹಾರವನ್ನು ಹಿಡಿದುಕೊಳ್ಳವುದಿಲ್ಲ. ಕಪ್ಪೆ ಹಾಗೆ ಅಲ್ಲದೆ ಆಹಾರವನ್ನು ತನಗಿಂತ ಶೇಕಡ ಹತ್ತರಷ್ಟು ಹೆಚ್ಚು ದೂರವಾಗಿದ್ದರೂ ಅದನ್ನು ವೇಗವಾಗಿ ಹಿಡಿದುಕೊಳ್ಳುತ್ತದೆ. ಅದೇ ವಿಧವಾಗಿ ಕಪ್ಪೆಯಂತೆ ಚುರುಕಾದ ಮನಸ್ಸಿರುವವರು ಜ್ಞಾಪಕಶಕ್ತಿ ಹೆಚ್ಚಾಗಿ ಹೊಂದಿ, ಒಂದುಬಾರಿ ಓದಿದ ಯಾವ ವಿಷಯವನ್ನಾದರು ಜ್ಞಾಪಕವಿಟ್ಟುಕೊಂಡು

ಹೇಳುತ್ತಾರೆ. ಆದರೂ ಚುರುಕಾದ ನಾಲಿಗೆ ಇರುವ ಕಪ್ಪೆಗೆ ಹೇಗೆ ರುಚಿ ನೋಡಲಿಲ್ಲವೋ ಹಾಗೆ ಚುರುಕಾದ ಮನಸ್ಸು ಇರುವವರು ಯಾವ ಪುಸ್ತಕದಲ್ಲಿನ ಜ್ಞಾನವನ್ನಾದರೂ ಹೇಳಿದರು, ಜ್ಞಾನದಲ್ಲಿ ಸೂಕ್ಷ್ಮವಾದ ಧರ್ಮಗಳು ಅವರಿಗೆ ತಿಳಿದಿಲ್ಲ.

ಅಡಿಗೆ ಮಾಡುವವನಿಗೆ ಎಲ್ಲ ವಿಧಗಳ ಅಡಿಗೆಗಳ ರುಚಿ ವಿಷಯ ತಿಳಿದಿರುತ್ತದೆ. ಅಡಿಗೆ ಮಾಸ್ಟರ್‌ನನ್ನು ಒಂದು ಅಡಿಗೆ ವಿಷಯವನ್ನು ಕುರಿತು ಕೇಳಿದರೆ ಅದನ್ನು ತಿನ್ನದಿದ್ದರು ಅದು ಹೀಗೆ ಇರುತ್ತದೆಂಬ ಅದರ ರುಚಿಯನ್ನು ಹೇಳುತ್ತಾನೆ. ಅಡಿಗೆ ಮಾಸ್ಟರ್ ಸೊಪ್ಪಿನಸಾರು, ಸಾಂಬಾರು, ಪಲ್ಯಗಳ ರುಚಿ ಪ್ರಸ್ತುತ ತಿನ್ನದಿದ್ದರೂ ಆತನು ಹೇಳಿದಂತೆ, ಕೆಲವರು ಮೂರು ಮತಗಳ ಗ್ರಂಥಗಳಲ್ಲಿ ಯಾವ ಧರ್ಮಗಳು ಇವೆಯೋ ಸುಲಭವಾಗಿ ಹೇಳುತ್ತಾರೆ. ಒಂದುಬಾರಿ ಅಡಿಗೆಮಾಡಿದಷ್ಟು ಮಾತ್ರಕ್ಕೆ ಅಡಿಗೆ ಮಾಡಿದವನಿಗೆ ಅದರರುಚಿ ತಿಳಿದುಹೋದಂತೆ, ಒಂದುಬಾರಿ ಓದಿದ ಮಾತ್ರಕ್ಕೆ ಅದರಲ್ಲಿನ ಧರ್ಮಗಳಾವೋ ಕೆಲವರಿಗೆ ತಿಳಿದುಹೋಗುತ್ತದೆ. ಅದೇ ವಿಧವಾಗಿ ಮನುಷ್ಯರಲ್ಲಿ ಮೊಸಳೆ, ಕಪ್ಪೆ, ಅಡಿಗೆಮಾಸ್ಟರಂತೆ ಮೂರು ವಿಧಗಳು ಗ್ರಹಿಸುವಶಕ್ತಿ ಇರುವವರು ಇದ್ದಾರೆ. ಮೊಸಳೆಗೂ, ಕಪ್ಪೆಗೂ ತಿನ್ನುವ ಆಹಾರದ ರುಚಿ ತಿಳಿಯದಿದ್ದರು, ಅಡಿಗೆ ಮಾಡುವವನಿಗೆ ಪೂರ್ತಿ ರುಚಿ ತಿಳಿದಂತೆ, ಮೂಲ ಗ್ರಂಥಗಳಲ್ಲಿನ ಧರ್ಮಗಳನ್ನು ಗ್ರಹಿಸದವರು, ಗ್ರಹಿಸುವವರು ಇದ್ದಾರೆಂದು ಹೇಳಬಹುದು.

ಭೂಮಿ ಮೇಲೆ ಎಷ್ಟೋ ಜ್ಞಾನಿಗಳೆಂದುಕೊಳ್ಳುವವರು ಇದ್ದಾರೆ. ಕೆಲವರು ಅಮಿತವಾದ ಜ್ಞಾಪಕಶಕ್ತಿಹೊಂದಿ, ಎಲ್ಲ ಗ್ರಂಥಗಳಲ್ಲಿನ ವಿಷಯಗಳನ್ನು ಪುಟ (ಪೇಜಿ) ಗಳ ಸಂಖ್ಯೆಗಳೊಂದಿಗೆ ಹೇಳುವವರು ಇದ್ದಾರೆ. ಕೆಲವರಾದರೆ ಆಚರಣೆ ಮುಖ್ಯವೆಂದು ದಿನಕ್ಕೆ ಕೆಲವು ಬಾರಿ ಆರಾಧನೆಗಳು ಮಾಡುವವರು ಇದ್ದಾರೆ. ದೇವರ ಮೇಲೆ ಪೂರ್ತಿ ವಿಶ್ವಾಸವನ್ನು ಹೊಂದಿದವರು ಕೆಲವರಿದ್ದಾರೆ. ಕೆಲವರು ದೇವರನ್ನು ಹೆಚ್ಚಾಗಿ ಪ್ರೇಮಿಸುತ್ತಾ ಆತನನ್ನು ಹೊರತು ಇತರ ಯಾರನ್ನು ಆರಾಧಿಸದವರು ಇದ್ದಾರೆ. ಹೀಗೆ ಅನೇಕ ವಿಧಗಳಲ್ಲಿ ದೇವರನ್ನು

ಕುರಿತು ಪ್ರಯತ್ನಿಸುವವರು ಇದ್ದರೂ, ದೇವರು ಹೇಗಿರುತ್ತಾನೋ, ಎಲ್ಲಿರುತ್ತಾನೋ, ಏನು ಮಾಡುತ್ತಿರುತ್ತಾನೋ ಯಾರಿಗೂ ತಿಳಿಯದು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಇಲ್ಲಿಯವರೆಗೂ ಬದುಕಿರುವ ಎಂತಹವರಿಗಾಗಲಿ ದೇವರು ತಿಳಿಯಲಿಲ್ಲ. ದೇವರು ತಿಳಿದರೆ ಅವನು ಜನ್ಮದಿಂದಿರದೆ, ಶರೀರದಲ್ಲಿರದೆ ದೇವರಲ್ಲಿ ಐಕ್ಯವಾಗುತ್ತಾನೆ. ಆದ್ದರಿಂದ ಸಜೀವವಾಗಿರುವವನು ಯಾರಾಗಲಿ ದೇವರನ್ನು ನೋಡಿದವನು ಇಲ್ಲವೆಂದು ಹೇಳಬಹುದು. ಮನುಷ್ಯ ಬದುಕಿರುವಾಗ ದೇವರ ಧರ್ಮಗಳನ್ನು ತಿಳಿಯಬಹುದಾಗಲಿ, ದೇವರನ್ನು ತಿಳಿಯಲಾರನು. ಮೊದಲು ದೇವರ ಧರ್ಮಗಳನ್ನು ತಿಳಿದರೆ, ಅವುಗಳ ಆಧಾರದಿಂದ ದೇವರನ್ನು ತಿಳಿಯಬಹುದು. ದೇವರ ಧರ್ಮಗಳು ತಿಳಿಯುವುದಕ್ಕೆ ಮನುಷ್ಯರು ಹೇಳಿದ ಜ್ಞಾನವನ್ನು ಆಶ್ರಯಿಸದೆ, ದೇವರು ಹೇಳಿದ ಜ್ಞಾನವನ್ನೇ ಮನುಷ್ಯ ಆಶ್ರಯಿಸಬೇಕು. ದೇವರು ಯಾವಾಗಾದರೂ ಮನುಷ್ಯನ ರೂಪದಲ್ಲಿಯೇ ತನ್ನ ಜ್ಞಾನವನ್ನು ಹೇಳುತ್ತಾನೆ. ಅಂತಹದರಲ್ಲಿ ಯಾವುದು ಮನುಷ್ಯ ಹೇಳಿರುವ ಜ್ಞಾನ? ಯಾವುದು ದೇವರು ಹೇಳಿದ ಜ್ಞಾನ? ಎಂಬ ಪ್ರಶ್ನೆ ಬರುತ್ತದೆ. ಇದು ಒಂದು ವಿಧವಾಗಿ ಕಷ್ಟವಾದ ಪ್ರಶ್ನೆಯಾಗಿದ್ದರೂ ಇದರ ಉತ್ತರ ಬಹಳ ಸುಲಭವಾದುದೆ, ಅದು ಹೇಗೆ ಎಂದರೆ!

ಮನುಷ್ಯ ಎಲ್ಲಿ ಹೇಳಿದರೂ ಅಧರ್ಮಗಳನ್ನೆ ಹೇಳುತ್ತಾನೆ. ದೇವರು ಭಗವಂತನ ರೂಪದಲ್ಲಿ ಎಲ್ಲಿ ಹೇಳಿದರೂ ಧರ್ಮಗಳನ್ನೇ ಹೇಳುತ್ತಾನೆ. ಲೋಕದಲ್ಲಿರುವವರಿಗೆ ಅನುಕೂಲ ಇಲ್ಲದಿರುವವು ಧರ್ಮಗಳು, ಜನರಿಗೆ ಅನುಕೂಲವಾದವು ಅಧರ್ಮಗಳು. ಈ ಸೂತ್ರದಿಂದ ಸಾಧಾರಣ ಮನುಷ್ಯ ಯಾರಾಗಿರುವುದು, ಅಸಾಧಾರಣ ಭಗವಂತನು ಯಾರಾಗಿರುವುದು, ಸುಲಭವಾಗಿ ತಿಳಿಯಬಹುದು. ಇದೇ ಸೂತ್ರದ ಪ್ರಕಾರ ಭಗವದ್ಗೀತೆಯನ್ನು ಹೇಳಿರುವುದು ಸಾಮಾನ್ಯ ಮನುಷ್ಯ ಅಲ್ಲವೆಂದು, ಸ್ವತಃ ಭಗವಂತನೇ ಹೇಳಿದ್ದಾನೆಂದು ತಿಳಿಯುತ್ತದೆ. **ಭಗವದ್ಗೀತೆಯಲ್ಲಿ ಇವು ಧರ್ಮಗಳೆಂದು, ಇವು ಅಧರ್ಮಗಳೆಂದು ಸ್ಪಷ್ಟವಾಗಿ ತಿಳಿದಿವೆ. ಕರ್ಮಯೋಗ, ಬ್ರಹ್ಮಯೋಗ, ಭಕ್ತಿಯೋಗ ಎಂಬ ಮೂರು**

**ಧರ್ಮಗಳು ಗೀತೆಯಲ್ಲಿ ತಿಳಿಸಲಾಗಿದೆ. ಅಷ್ಟೇ ಅಲ್ಲದೆ ಯಜ್ಞಗಳು, ವೇದಗಳು, ದಾನಗಳು, ತಪಸ್ಸುಗಳು ಎನ್ನುವವು ನಾಲ್ಕು ಅಧರ್ಮಗಳೆಂದು ಹೇಳಲಾಗಿದೆ. ಅಧರ್ಮಗಳಾದ ಯಜ್ಞಗಳಿಂದ, ವೇದಗಳಿಂದ, ದಾನಗಳಿಂದ, ತಪಸ್ಸುಗಳಿಂದ ದೇವರನ್ನು ತಿಳಿಯುವುದಕ್ಕೆ ಶಕ್ಯವಾಗುವುದಿಲ್ಲವೆಂದು ಹೇಳಲಾಗಿದೆ.** ದೇವರನ್ನು ತಿಳಿಯುವುದಕ್ಕೆ ಕರ್ಮ ದಹಿಸಲ್ಪಡಬೇಕು. ಕರ್ಮ ದಹಿಸಲ್ಪಡುವುದಕ್ಕೆ ಧರ್ಮಗಳಾದ ಕರ್ಮಯೋಗ, ಬ್ರಹ್ಮಯೋಗ, ಭಕ್ತಿಯೋಗದಿಂದಲೇ ಸಾಧ್ಯವಾಗುತ್ತದೆ. ಈ ವಿಷಯ ಕೇಳಿದ ನಂತರ ಕೆಲವರು ಆಶ್ಚರ್ಯವನ್ನು ವ್ಯಕ್ತಮಾಡುತ್ತಾ "ದೇವರ ಧರ್ಮಗಳೆಂದರೆ ಎಷ್ಟಿವೆಯೋ ಅಂದುಕೊಂಡಿದ್ದೆವು. ಈಗ ಕೇವಲ ಮೂರೇ ಧರ್ಮಗಳೆಂದು ಕೇಳುವುದು ನಮಗೆ ಸ್ವಲ್ಪ ಆಶ್ಚರ್ಯವನ್ನು ಉಂಟುಮಾಡುತ್ತದೆ. ನಂತರ ಜ್ಞಾನಿಗಳು ಅನ್ನುವವರೆಲ್ಲರೂ ಆಚರಿಸುವ ಯಜ್ಞಗಳನ್ನು, ವೇದಗಳನ್ನು, ದಾನಗಳನ್ನು, ತಪಸ್ಸುಗಳನ್ನು ಅಧರ್ಮಗಳೆನ್ನುವುದು ಸ್ವಲ್ಪ ದುಃಖವಾಗಿದೆ." ಎಂದು ಹೇಳಿದರು. ಅದಕ್ಕೆ ನಾವು ಹೇಳುವುದೇನೆಂದರೆ! ನಾವು ಕೆಲವರ ಮೇಲೆ ಕಕ್ಷೆಯಿಂದಲೋ, ದ್ವೇಷದಿಂದಲೋ ಹೇಳುವ ವಿಷಯವಲ್ಲ ಅಲ್ಲವೆ! ಇವು ಭಗವದ್ಗೀತೆಯಲ್ಲಿ ಸ್ವತಃವಾಗಿ ಕೃಷ್ಣಭಗವಾನನು ಹೇಳಿದ ಮಾತುಗಳೆಂದು ಗುರುತಿಸಿಕೊಳ್ಳಬೇಕು.

ಮನುಷ್ಯರನ್ನು ದೇವರ ವಿಷಯವಾಗಿ ಬಾಹ್ಯಪ್ರಪಂಚದಲ್ಲಿ ಮೂರು ವಿಧಗಳಾಗಿ ವಿಭಜಿಸಬಹುದು. ಒಂದು ನಾಸ್ತಿಕರು, ಎರಡು ಆಸ್ತಿಕರು, ಮೂರು ಹೇತುವಾದಿಗಳು. ನಾಸ್ತಿಕರು ಎಂದರೆ ದೇವರು ಇಲ್ಲ ಎನ್ನುವವರು, ನಾಸ್ತಿಕರು ಇತ್ತ ಧರ್ಮಪರರು ಅಲ್ಲ, ಅತ್ತ ಅಧರ್ಮಪರರೂ ಅಲ್ಲ. ಧರ್ಮ ಅಧರ್ಮಗಳಿಗೆ ಸಂಬಂಧ ಇಲ್ಲದವರು ನಾಸ್ತಿಕರು. ಅಂತಹವರು ಬಾಹ್ಯಸಮಾಜ ದಲ್ಲಿ ಬಹುಸ್ವಲ್ಪಜನ ಮಾತ್ರವೆ ಇರುತ್ತಾರೆ. ಪ್ರಪಂಚದಲ್ಲಿ ಆಸ್ತಿಕರು ಅನ್ನುವವರು ಶೇಕಡ 90% ರಷ್ಟು ಇದ್ದಾರೆ. ನಮ್ಮ ಅಂದಾಜಿನ ಪ್ರಕಾರ ನಾಸ್ತಿಕರು ಕೇವಲ ಶೇಕಡ ಎರಡರಷ್ಟು ಇರುವಾಗ, ಹೇತುವಾದಿಗಳು ಶೇಕಡ 8ರಷ್ಟು ಇರಬಹುದು. ನಾಸ್ತಿಕರು, ಹೇತುವಾದಿಗಳು ಸೇರಿ ಶೇಕಡ 10ರಷ್ಟು ಇದ್ದರೆ ಉಳಿದ 90

ರಷ್ಟು ಯಾವುದೋ ಒಂದು ವಿಧವಾಗಿ ದೇವರ ಮೇಲೆ ನಂಬಿಕೆ ಇರುವವರಿದ್ದಾರೆಂದು ಹೇಳಬಹುದು. ದೇವರು ಇಲ್ಲ ಎನ್ನುವವರು ನಾಸ್ತಿಕರಾದರೆ, ದೇವರಿದ್ದಾನೆನ್ನುವವರು ಆಸ್ತಿಕರಾಗಿದ್ದು, ದೇವರು ಹೇಗಿದ್ದಾನೆಂದು ಪ್ರಶ್ನಿಸುವವರು ಹೇತುವಾದಿಗಳು. ಹೇತುವಾದಿಗಳು ದೇವರಿದ್ದಾನೆನ್ನುವವರನ್ನು ಸಮರ್ಥಿಸುವುದಿಲ್ಲ. ಇಲ್ಲ ಎನ್ನುವವರನ್ನು ಸಮರ್ಥಿಸುವುದಿಲ್ಲ. ದೇವರಿದ್ದಾನೆನ್ನುವ ಆಸ್ತಿಕರನ್ನು ನೋಡಿ ದೇವರು ಹೇಗೆ ಇದ್ದಾನೆಂದು ಪ್ರಶ್ನಿಸುತ್ತಾರೆ. ಹಾಗೆ ಇಲ್ಲ ಎನ್ನುವವರನ್ನು (ನಾಸ್ತಿಕರನ್ನು) ನೋಡಿ ಹೇಗೆ ಇಲ್ಲವೆಂದು ಪ್ರಶ್ನಿಸುತ್ತಾರೆ. ಯಾವ ವಿಷಯವನ್ನಾದರು ಹೇತುಬದ್ಧವಾಗಿ ತಿಳಿದುಕೊಳ್ಳಬೇಕೆನ್ನುವವರು ಹೇತುವಾದಿಗಳು. ಹೇತು ಎಂದರೆ ಕಾರಣ ಎಂದು ಅರ್ಥ. ದೇವರಿದ್ದಾನೆನ್ನುವವರನ್ನು ನೋಡಿ ದೇವರು ಯಾವ ಕಾರಣದಿಂದ ಇದ್ದಾನೆಂದು ಕೇಳುವುದು ಅವರ ಕರ್ತವ್ಯ. ಅವರ ಪ್ರಶ್ನೆಗೆ ಉತ್ತರ ದೊರೆತರೆ ಅವರು ಏನನ್ನಾದರು ಒಪ್ಪಿಕೊಳ್ಳುತ್ತಾರೆ. ಹೇತುವಾದಿಗಳಿಗೆ ಶಾಸ್ತ್ರಬದ್ಧತೆ ಮುಖ್ಯವೆಂದು ತಿಳಿಯುತ್ತದೆ. ದೇವರು ಶಾಸ್ತ್ರಬದ್ಧವಾದ ಜ್ಞಾನವನ್ನು ಹೇಳಿದ್ದಾನೆ ಆದ್ದರಿಂದ, ದೇವರ ಜ್ಞಾನವನ್ನು ಹೇತುವಾದಿಗಳು ಸಂಪೂರ್ಣವಾಗಿ ಬೇಗನೆ ಅರ್ಥಮಾಡಿಕೊಳ್ಳುತ್ತಾರೆ.

ನಾಸ್ತಿಕರು, ಹೇತುವಾದಿಗಳು ಅಲ್ಲದೆ ಇನ್ನೂ ಉಳಿದವರೆಲ್ಲರೂ ಆಸ್ತಿಕರೆ. ಇದು ಒಂದು ಹಿಂದೂಮತಕ್ಕೆ ಮಾತ್ರವೆ ಅಲ್ಲ. ಎಲ್ಲಾ ಮತಗಳಿಗೂ ಅನ್ವಯಿಸುವ ವಿಧಾನವೆಂದು ತಿಳಿಯಬೇಕು. ಮನುಷ್ಯರಲ್ಲಿ ಸುಮಾರು 90 ರಷ್ಟು ಇರುವ ಆಸ್ತಿಕರೆಲ್ಲರೂ ಒಂದೇ ವಿಧವಾಗಿ ಇಲ್ಲ. ದೇವರು ಹೇಳಿದ ಧರ್ಮವರರು, ಅಧರ್ಮವರರು ಎಲ್ಲರೂ ಆಸ್ತಿಕರಲ್ಲಿಯೆ ಇರುತ್ತಾರೆ. ಆಸ್ತಿಕರಲ್ಲಿ ಇಂದು ಧರ್ಮವರರು ಸ್ವಲ್ಪವಾದರೂ ಕಾಣಿಸುತ್ತಿಲ್ಲ. ಎಲ್ಲಿಯಾದರು ಅಪರೂಪವಾಗಿ ಇದ್ದಾರೇನೋ ಹೇಳಲಾರೆವು. ಅಧರ್ಮವರರು ಆದರೆ ಅಲ್ಲಲ್ಲಿ ಕಾಣಿಸುತ್ತಿದ್ದಾರೆ. ಆಸ್ತಿಕರಲ್ಲಿ ಧರ್ಮ ಅಧರ್ಮವರರು ಅಲ್ಲದೆ ಅಜ್ಞಾನಿಗಳು ಮುಖ್ಯವಾಗಿ ಮೊದಲು ಹೇಳುವವರು ಮತವಾದಿಗಳು. ಮತವಾದಿಗಳು ಒಂದು ಮತಕ್ಕೆ ಪರಿಮಿತಿ ಆಗುವುದಿಲ್ಲ. ಪ್ರಪಂಚದಲ್ಲಿ ಎಷ್ಟು ಮತಗಳಿವೆಯೋ ಎಲ್ಲ ಮತದವರು,

ತಮ್ಮ ಮತವೇ ದೇವರಿಗೆ ಹತ್ತಿರವಾಗಿರುವ ಮತವೆಂದು, ತಾವು ಹೇಳಿಕೊಳ್ಳುವ ದೇವರೆ ಎಲ್ಲರಿಗಿಂತ ದೊಡ್ಡವನೆಂದು ಅಂದುಕೊಳ್ಳುವರು. ಅಂತಹದರಲ್ಲಿ ಇತರ ಮತಗಳನ್ನು ಅಗೌರವಾಗಿ ನೋಡುವುದು, ದ್ವೇಷದಿಂದ ನೋಡುವುದು ನಡೆಯುತ್ತದೆ. ತಮ್ಮ ಮತವನ್ನು ತಾವು ದೊಡ್ಡದಾಗಿ ನೋಡಿಕೊಂಡಾಗ, ಉಳಿದ ಮತಗಳನ್ನು ಚಿಕ್ಕದಾಗಿ ನೋಡುವುದು ಸಹಜವಾಗಿ ನಡೆಯುತ್ತಿರುತ್ತದೆ. ತಮ್ಮ ಮತವು ಹೊರತು ಉಳಿದ ಮತಗಳೆಲ್ಲ ತಪ್ಪುದಾರಿಯಲ್ಲಿವೆಂದುಕೊಳ್ಳುವ ಒಂದು ಮತಸ್ಥರು ಉಳಿದ ಮತಗಳನ್ನು ಕುರಿತು ತಪ್ಪಾಗಿ ಹೇಳುವುದು, ತಮ್ಮ ಮತವನ್ನು ಕುರಿತು ಒಳ್ಳೆಯದಾಗಿ ಹೇಳಿಕೊಳ್ಳುವುದು ನಡೆಯುತ್ತದೆ. ಪ್ರತಿ ಮತಸ್ಥನು ಈ ವಿಧವಾಗಿ ಪ್ರವರ್ತಿಸುತ್ತಾ, ತನ್ನ ಮತವನ್ನು ಅಭಿವೃದ್ಧಿ ಮಾಡಿಕೊಳ್ಳುವುದಕ್ಕೆ ವಿಚಕ್ಷಣ ಕಳೆದುಕೊಂಡು ಪರಮತಗಳನ್ನು ನಿಂದಿಸುತ್ತಾನೆ. ಅಂತಹದರಲ್ಲಿ ಮತ ದ್ವೇಷಗಳು, ಮತ ಘರ್ಷಣೆಗಳು ಏರ್ಪಡುತ್ತವೆ. ಮತದ್ವೇಷವು, ಮತಘರ್ಷಣೆ ಒಂದುಬಾರಿ ನಡೆದರೆ ಅರಣ್ಯದಲ್ಲಿ ಅಗ್ನಿ ಬಿದ್ದಂತಾಗುತ್ತದೆ. ಅರಣ್ಯದಲ್ಲಿ ಅಗ್ನಿಬಿದ್ದರೆ ನಂದಿಸಲು ಎಷ್ಟು ಕಷ್ಟವೋ, ಮತಘರ್ಷಣೆಗಳು ಒಂದುಬಾರಿ ಪ್ರಾರಂಭವಾದರೆ ಅವು ಸ್ತಬ್ಧವಾಗುವುದಕ್ಕೆ ಬಹಳಕಾಲ ಬೇಕಾಗುತ್ತದೆ. ಅಷ್ಟರಲ್ಲಿ ಎಷ್ಟೋಜನ ಮನುಷ್ಯರ ಪ್ರಾಣಗಳು ಗಾಳಿಯಲ್ಲಿ ಬೆರೆತುಹೋಗುತ್ತವೆ. ಅರಣ್ಯದಲ್ಲಿ ಅಗ್ನಿ ಒಂದೇ ಕಡೆ ಹುಟ್ಟಿದರೆ ಅದು ಅರಣ್ಯವೆಲ್ಲ ವ್ಯಾಪಿಸಿ ಎಷ್ಟೋ ಬೆಲೆಯುಳ್ಳ ಗಂಧದ ಮರಗಳು, ಟೇಕು, ರಬ್ಬರ್ ಗಿಡಗಳನ್ನು ಸುಟ್ಟುಹಾಕಿದಂತೆ ಒಂದುಬಾರಿ ಮತಘರ್ಷಣೆ ಶುರುವಾದರೆ ವಿವೇಕವು ಕಳೆದುಕೊಂಡ ಮನುಷ್ಯರು, ಎಷ್ಟೋ ಬೆಲೆಯುಳ್ಳ ವ್ಯಕ್ತಿಗಳನ್ನು ಸಹ ಸಾಯಿಸುತ್ತಾರೆ.

ಮತಘರ್ಷಣೆ ಮಹತ್ಯವನ್ನು ಇಷ್ಟು ಎಂದು ಹೇಳುವುದಕ್ಕೆ ಯಾರಿಗೂ ಕೈಲಾಗುವುದಿಲ್ಲ. ಅದು ಕೊನೆಗೆ ದೇಶಗಳ ಮಧ್ಯದಲ್ಲಿ ಯುದ್ಧವನ್ನು ಸಹ ತಂದಿಡುತ್ತದೆ. ಯಾವ ಸಂಬಂಧವಿಲ್ಲದ, ಏನು ತಿಳಿಯದ ಚಿಕ್ಕಮಕ್ಕಳು, ವೃದ್ಧರನ್ನು ಸಹಿತವು ಮತದ್ವೇಷದಿಂದ ಹಿಂಸಿಸಿ ಸಾಯಿಸುವ ಮೂರ್ಖರಾಗಿ ಮನುಷ್ಯರು

ಬದಲಾಗಿಹೋಗುತ್ತಾರೆ. ಕಿಂಚಿತ್ತಾದರೂ ದೈವಜ್ಞಾನ ಇಲ್ಲದ ಮೂಢರಿಂದ ಪ್ರಾರಂಭವಾದ ಮತದ್ವೇಷಗಳು ಬಹಳ ಅಪಾಯಕರವಾದವು. ಮತವನ್ನು ರಕ್ಷಿಸುವುದಕ್ಕೆಂದು, ಸ್ವಮತ ರಕ್ಷಣೆ ಹೆಸರಿಂದ ತಯಾರಾದ ಕೆಲವು ಮತಸಂಘಗಳು, ದೈವಜ್ಞಾನವನ್ನು ಬೋಧಿಸಿ ಮತವನ್ನು ರಕ್ಷಿಸಿಕೊಳ್ಳಬೇಕೆಂದುಕೊಳ್ಳದೆ, ಪರಮತವನ್ನು ಹಿಂಸೆಯಿಂದ ಅಡಗಿಸಿದರೆ ತಮ್ಮ ಮತವು ಕ್ಷೀಣಿಸುವುದಿಲ್ಲವೆಂಬ ದುರಭಿಪ್ರಾಯದಲ್ಲಿ ಇರುವುದರಿಂದ ಎಲ್ಲಾ ಮತಗಳವರು, ಅವರವರ ಮತಗಳನ್ನು ರಕ್ಷಿಸಿಕೊಳ್ಳಬೇಕೆಂಬ ಉದ್ದೇಶದಿಂದ, ಕೆಲವು ಹೆಸರುಗಳಿಂದ ಕೆಲವು ಸಂಘಗಳನ್ನು ತಯಾರು ಮಾಡಿಕೊಂಡು ಹಿಂಸೆಗೆ ದಾರಿಗಳು ಏರ್ಪಡಿಸಿಕೊಂಡಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಧರ್ಮ ಅಧರ್ಮವರರಾಗದೆ ಸ್ವಲ್ಪವೂ ಸಹ ಜ್ಞಾನ ಇಲ್ಲದವರು ಹಿಂದೂಧರ್ಮ ರಕ್ಷಣಾ ಸಂಘದಲ್ಲಿದ್ದು ಹಿಂದೂ (ಇಂದೂ) ಧರ್ಮ ಪ್ರಧಾತನು, ಹಿಂದೂ ಧರ್ಮ ಸಿದ್ಧಾಂತಕರ್ತನಾದ ನನ್ನನ್ನು ಸಹ ಗುರುತಿಸಲಾರದೆ ಕುರುಡರಾಗಿ, ಮತ ಎಂಬ ಬೂಚಿ (ಮಾಯೆ) ಯನ್ನು ಅಡ್ಡ ಇಟ್ಟುಕೊಂಡು ನನ್ನದು ಬೇರೆ ಮತ. ಅನ್ನುವವರಿದ್ದಾರೆ ಅಂದರೆ ಈದಿನ ಹಿಂದೂಮತಸ್ಥರು ತಮ್ಮ ಮತವನ್ನೇ ತಾವು ಗುರುತಿಸಲಾರದ ಕುರುಡರಾಗಿದ್ದಾರೆಂದು ತಿಳಿಯುತ್ತದೆ. ಹೀಗೆ ಧರ್ಮ, ಅಧರ್ಮವು ಅಲ್ಲದೆ ಅಜ್ಞಾನ ಆಚರಣೆಯಲ್ಲಿ ಮೊದಲ ಸ್ಥಾನದಲ್ಲಿರುವುದು ಮತ ಎನ್ನುವುದು. ಮತ ಎನ್ನುವುದು ಎಲ್ಲಾ ದೇಶಗಳಲ್ಲಿನ ಪ್ರಜೆಗಳಿಗೆ ಇರುವುದರಿಂದ, ಮತ ಹುಚ್ಚು ಎಲ್ಲರಿಗೂ ಇರುವುದರಿಂದ ಎಲ್ಲ ಮತದವರು ಮತರಕ್ಷಣೆ, ಮತಾಭಿವೃದ್ಧಿ ಎಂಬ ಅಜ್ಞಾನದಲ್ಲಿ ಮುಳುಗಿದ್ದಾರೆ.

ಭಗವಂತನು ತನ್ನ ಭಗವದ್ಗೀತೆಯಲ್ಲಿ ನಾಲ್ಕು ಅಧರ್ಮಗಳನ್ನು ತಿಳಿಸಿದ್ದಾನೆ ಅಲ್ಲವೆ! ಅದರಲ್ಲಿ ನೀವು ಹೇಳಿದ ಮತದ್ವೇಷ ಎನ್ನುವುದು ಅಧರ್ಮವಾಗಿ ಹೇಳಲಿಲ್ಲವೆಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ದೇವರು ಹೇಳಿರುವವು ನಾಲ್ಕು ಅಧರ್ಮಗಳೆ. ಅದರಲ್ಲಿ ಮತದ್ವೇಷ ಎನ್ನುವುದು ಇಲ್ಲ. ಆದರೆ ದೇವರು ಹೇಳಿದ ಅಧರ್ಮಗಳು ನಾಲ್ಕು ದೊಡ್ಡ ನದಿಗಳಂತಹವು ಅಂದುಕೊಳ್ಳೋಣ. ಒಂದು ದೊಡ್ಡ ನದಿಗೆ

ಎಷ್ಟೋ ಉಪನದಿಗಳು ಇರುವಂತೆ, ಒಂದು ದೊಡ್ಡ ಅಧರ್ಮದ ಹಿಂದೆ ಅದಕ್ಕೆ ಸಂಬಂಧಿಸಿದ ಅಜ್ಞಾನ ಆಚರಣೆಗಳು ಎಷ್ಟೋ ಇರುತ್ತವೆ. ಹಾಗೆಯೇ ಪಥ (ದೈವ ಮಾರ್ಗ) ಎನ್ನುವುದು ಮತವಾಗಿ ಬದಲಾಗಿದೆ. ಪಥ ಅಥವಾ ಮಾರ್ಗ ಎನ್ನುವುದು ಜ್ಞಾನವಾಗಿದ್ದು, ಮತ ಎನ್ನುವುದು ಅಜ್ಞಾನವಾದದ್ದು. ಪಥ ಎನ್ನುವುದು ಮೋಕ್ಷವೆನ್ನುವ ಗಮ್ಯದಕಡೆ ತೆಗೆದುಕೊಂಡುಹೋಗುವುದು. ಆದ್ದರಿಂದ ಅದನ್ನು ಜ್ಞಾನ ಎಂದು ಅನ್ನುತ್ತಿದ್ದೇವೆ. ಮತ ಎನ್ನುವುದು ಪಾಪಗಳನ್ನು ಅಂಟಿಸಿ ಜನ್ಮಗಳಿಗೆ ತೆಗೆದುಕೊಂಡು ಹೋಗುತ್ತದೆ. ಆದ್ದರಿಂದ ಅದನ್ನು ಅಜ್ಞಾನ ಅನ್ನುತ್ತಿದ್ದೇವೆ. ವಾಸ್ತವಕ್ಕೆ ನಾಲ್ಕು ಅಧರ್ಮಗಳಲ್ಲಿ ಮತ ಎನ್ನುವುದು ಇಲ್ಲದಿದ್ದರೂ ಅದರಿಂದ ದೇವರು ತಿಳಿಯುವುದಿಲ್ಲ. ಆದ್ದರಿಂದ ಮತವನ್ನು ಅಜ್ಞಾನವೆಂದು ಹೇಳಬೇಕಾಗಿಬಂದಿದೆ. ನಾಲ್ಕು ಅಧರ್ಮಗಳು ಹೊರಗೆ ದೇವರ ಮೂಲಕ ನಮಗೆ ತಿಳಿದರೂ, ಅವುಗಳ ಹಿಂದೆ ಅವುಗಳಿಗೆ ಅನುಬಂಧವಾಗಿ ಎಷ್ಟೋ ಅಜ್ಞಾನ ಆಚರಣೆಗಳು ಇವೆಯೆಂದು ಹೇಳಬಹುದು.

ಒಂದು ಅಧರ್ಮದ ಹಿಂದೆ ಅದಕ್ಕೆ ಅನುಬಂಧವಾಗಿ ಎಷ್ಟೋ ಅಜ್ಞಾನ ಆಚರಣೆಗಳು ಇರುವಂತೆ, ಒಂದು ಧರ್ಮದ ಹಿಂದೆಯೂ ಸಹ ಅದಕ್ಕೆ ಅನುಬಂಧವಾಗಿ ಎಷ್ಟೋ ಚಿಕ್ಕ ಚಿಕ್ಕ ಜ್ಞಾನಾಚರಣೆಗಳು ಇರುತ್ತವೆ. ಭಗವದ್ಗೀತೆಯಲ್ಲಿ ಮೂರು ಧರ್ಮಗಳನ್ನೇ ಹೇಳಿದರೂ ಅವುಗಳನ್ನು ಆಚರಿಸುವುದಕ್ಕೆ ಎಷ್ಟೋ ಆಚರಣೆಗಳು ಅನೇಕ ಶ್ಲೋಕಗಳ ರೂಪದಲ್ಲಿ ಹೇಳಿದ್ದಾರೆ. ದ್ರವ್ಯಯಜ್ಞವನ್ನು ಕುರಿತು, ಜ್ಞಾನಯಜ್ಞವನ್ನು ಕುರಿತು ಜ್ಞಾನಯೋಗ ಎಂಬ ಅಧ್ಯಾಯದಲ್ಲಿ 33ನೇ ಶ್ಲೋಕದಲ್ಲಿ ಹೇಳಿದ್ದಾರೆ. ಯಜ್ಞಗಳು ಅಧರ್ಮಗಳೆಂದು ಗೀತೆಯಲ್ಲಿದ್ದರೂ ಇಲ್ಲಿ 33ನೇ ಶ್ಲೋಕದಲ್ಲಿ ಹೇಳಿದ ಯಜ್ಞಗಳು ಧರ್ಮಕ್ಕೆ ಅನುಬಂಧವಾದವು. ಈಗ ಕೆಲವರಿಗೆ ಒಂದು ಪ್ರಶ್ನೆ ಬರುತ್ತದೆ. ಯಜ್ಞಗಳು ಅಧರ್ಮಗಳೆಂದು ಇಲ್ಲಿಯವರೆಗೂ ಹೇಳಿ ಇಲ್ಲಿ ಜ್ಞಾನಯೋಗ 33ನೇ ಶ್ಲೋಕದಲ್ಲಿ ಹೇಳಿದ ಯಜ್ಞವು ಧರ್ಮ ಸಂಬಂಧವಾದುದೆಂದು ಏಕೆ ಹೇಳುತ್ತಿದ್ದೀರೆಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಹೀಗಿದೆ. ಅಧರ್ಮ

ಗಳೆಂದು ಹೇಳಿರುವುದು ಮನುಷ್ಯರು ಮಾಡುವ ಬಾಹ್ಯ ಯಜ್ಞಗಳು. ಆದರೆ ಇಲ್ಲಿ 33ನೇ ಶ್ಲೋಕದಲ್ಲಿ ಹೇಳಿದ ಯಜ್ಞವು ಬಾಹ್ಯವಾಗಿ ಮಾಡುವುದಲ್ಲ. ಅಂತರಂಗದಲ್ಲಿ ಆಚರಿಸಬೇಕಾಗಿರುವುದು. ಈ ಯಜ್ಞದಲ್ಲಿ ಮನುಷ್ಯನಿಗಿರುವ ಕರ್ಮಗಳು ಸುಟ್ಟುಹೋಗುತ್ತಿವೆ. ಆದ್ದರಿಂದ ಜ್ಞಾನಯಜ್ಞ ಎನ್ನುವುದು ಧರ್ಮಕ್ಕೆ ಸಂಬಂಧಿಸಿರುವುದೆಂದು ಹೇಳಬಹುದು. ಒಂದು ನದಿಗೆ ಎಷ್ಟೋ ಉಪನದಿಗಳಿರು ವಂತೆ, ಒಂದು ಉಪನದಿಗೆ ಎಷ್ಟೋ ಚಿಕ್ಕ ಚಿಕ್ಕ ಕಾಲುವೆಗಳಿರುವಂತೆ, ಒಂದು ಧರ್ಮಕ್ಕೆ ಸಂಬಂಧಿಸಿರುವವು ಎಷ್ಟೋ ಕಾರ್ಯಗಳಿರುತ್ತವೆ. ಆ ಕಾರ್ಯ ಗಳೆಲ್ಲವನ್ನೂ ಜ್ಞಾನಕಾರ್ಯಾಚರಣೆಗಳೇ ಎನ್ನಬಹುದು. ಯಜ್ಞಗಳು ಬಾಹ್ಯವಾಗಿ ನಡೆಯುವವೆಲ್ಲವೂ ಅಧರ್ಮಕ್ಕೆ ಸಂಬಂಧಿಸಿರುವವಾಗಿದ್ದು, ಶರೀರದೊಳಗೆ ನಡೆಯುವ ಯಜ್ಞವು ಧರ್ಮಗಳಲ್ಲಿ ಮೊದಲ ಧರ್ಮವಾದ ಕರ್ಮಯೋಗಕ್ಕೆ ಸಂಬಂಧಿಸಿರುವುದು.

ಪ್ರಜೆಗಳು ನಾವು ಜ್ಞಾನದಕಡೆ ಪ್ರಯಾಣಿಸುತ್ತೇವೆಂದು ಕೆಲವರು, ನಾವು ಭಕ್ತಿಮಾರ್ಗದಲ್ಲಿ ಇದ್ದೇವೆಂದು ಕೆಲವರು, ನಾವು ದೇವಾಲಯಗಳನ್ನು ಕಟ್ಟಿಸಿ ಯಾರು ಮಾಡಲಾರದ ಕೆಲಸವನ್ನು ಮಾಡುತ್ತಿದ್ದೇವೆಂದುಕೊಳ್ಳುವವರು ಕೆಲವರು, ನಾವು ಮತವನ್ನೂ, ಮತಧರ್ಮಗಳನ್ನೂ ಕಾಪಾಡುತ್ತಿದ್ದೇವೆ, ದೇವರಿಗೆ ನಮಗಿಂತ ಮುಖ್ಯವಾದವರು ಯಾರು ಇಲ್ಲವೆನ್ನುವವರು ಕೆಲವರೂ, ಕೆಲವರು ಸಂಗೀತದಲ್ಲಿ ದೇವರ ಹಾಡುಗಳನ್ನು ಜೋಡಿಸಿ ಹಾಡುತ್ತಾ, ನಮಗಿಂತ ಮೀರಿ ಭಜನೆ ಮಾಡುವವರು ಯಾರು ಇಲ್ಲವೆಂದುಕೊಳ್ಳುವವರು ಕೆಲವರು ಇದ್ದಾರೆ. ಹೀಗೆ ಹೇಳಿಕೊಳ್ಳುತ್ತಾ ಹೋದರೆ ಒಬ್ಬೊಬ್ಬರು ಒಂದೊಂದು ವಿಧದ ಕಾರ್ಯಗಳನ್ನು ಮಾಡುತ್ತಾ ನಾವು ಮಾಡುವುದೆ ನಿಜವಾದ ಭಕ್ತಿಯೆಂದು, ಅದೇ ನಿಜವಾದ ಸಾಧನೆ ಎಂದು, ಅದೇ ನಿಜವಾದ ಧರ್ಮವೆಂದು ಅಂದುಕೊಳ್ಳುತ್ತಾರೆ. ಈಗ ನಾವು ಅವುಗಳೆಲ್ಲವನ್ನೂ ಸಿಕ್ಕುಬಿಡಿಸಿ, ಯಾವುವು ನಿಜವಾದ ಧರ್ಮಗಳೊ, ಯಾವು ಅಧರ್ಮಗಳೊ ವಿವರಿಸಿ ಹೇಳಬೇಕಾದ ಕರ್ತವ್ಯ ಒಬ್ಬ ಸಿದ್ಧಾಂತಕರ್ತನಾಗಿ ನನಗಿದೆ. ನಾನು ಹೇಳುವವು ಚಿಕ್ಕ ಚಿಕ್ಕ

ಅಜ್ಞಾನಗಳು ಮಾತ್ರವೆ ಇರುತ್ತವೆ. ದೊಡ್ಡ ನದಿಗಳಂತಹ ನಾಲ್ಕು ಅಧರ್ಮಗಳನ್ನು ಭಗವದ್ಗೀತೆಯಲ್ಲಿ ದೇವರೇ ಹೇಳಿದ್ದಾನೆ. ಗೀತೆಯಲ್ಲಿ ಭಗವಂತನು ಹೇಳಿದ ನಾಲ್ಕು ಅಧರ್ಮಗಳು ಸ್ವಲ್ಪವೂ ಸಹ ಯಾರಿಗೂ ಇಷ್ಟವಾಗುವುದಿಲ್ಲವೆಂದು ಹೇಳಬಹುದು. ಏಕೆಂದರೆ ನಾಲ್ಕು ಅಧರ್ಮಗಳನ್ನು ಮನುಷ್ಯರೆಲ್ಲರೂ ಒಳ್ಳೆಯ ಕಾರ್ಯಗಳೆಂದು, ಒಳ್ಳೆಯ ಧರ್ಮಗಳೆಂದು ತಿಳಿದವರಾಗಿ ಎಷ್ಟೋ ಭಕ್ತಿಯಿಂದ ಮಾಡುತ್ತಿದ್ದಾರೆ. ಎಷ್ಟೋ ಶ್ರದ್ಧಾಭಕ್ತಿಗಳಿಂದ ಮಾಡುವ ಕಾರ್ಯಗಳನ್ನು ಒಂದೇಬಾರಿ ಕೆಟ್ಟಕಾರ್ಯಗಳಾಗಿ, ಅಧರ್ಮಗಳಾಗಿ ಕೇಳುವುದರಿಂದ ಎಲ್ಲರಿಗೂ ಒಂದು ವಿಧವಾದ ಕೋಪ ಬಂದಿರುತ್ತದೆ. ಹೇಳುವವನು ಮನುಷ್ಯನಾದರೆ ಅವನನ್ನು ಸುಮ್ಮನೆ ಬಿಡದೆ ಚಿತ್ರಹಿಂಸೆಗಳು ಇಟ್ಟು ಸಾಯಿಸುವವರು. ಆದರೆ ಹೇಳಿದವನು ಭಗವಂತನು, ಆದಲ್ಲಿಯೂ ಈಗ ಆತನು ಇಲ್ಲ. ಆದ್ದರಿಂದ ಕಕ್ಕಲಾರದೆ ನುಂಗಲಾರದೆ ಜನ ಇರುವಾಗ, ಈಗ ನನ್ನಂತಹವರು ಪುನಃ ಜ್ಞಾಪಕ ಮಾಡುವುದು ಉಣ್ಣಾದ ಗಾಯದ ಮೇಲೆ ಕಾರ ಚಲ್ಲಿದಂತಿರುತ್ತದೆ. ಆ ನೋವಿಗೆ ನಾನು ಕಾಣಿಸಿದರೆ ದೂಷಿಸುತ್ತಾರೆ. ದೊರೆತರೆ ಸುಮ್ಮನೆ ಬಿಡುವುದಿಲ್ಲ. ಈ ವಿಷಯ ಕೃಷ್ಣನಿಗೂ ಸಹ ತಿಳಿದಿತ್ತು. ಅದಕ್ಕೆ ಯಾರಿಗೂ ತಿಳಿಯದಂತೆ ಅರ್ಜುನನಿಗೊಬ್ಬನಿಗೆ, ಯಾರಿಗೂ ಕೇಳಿಸದಂತೆ ಪಕ್ಕಕ್ಕೆ ಕರೆದುಕೊಂಡು ಹೋಗಿ ಹೇಳಲಾಗಿದೆ. ಮೂರ್ಖರ ಹತ್ತಿರ ತೊಂದರೆ ಇರುತ್ತದೆಂದು ತಿಳಿದ ಭಗವಂತನು, ಅಧರ್ಮಗಳನ್ನು ಕುರಿತಾಗಲಿ, ಧರ್ಮಗಳನ್ನು ಕುರಿತಾಗಲಿ ಎರಡನೇ ಬಾರಿ ಯಾರ ಹತ್ತಿರವು ಹೇಳಲಿಲ್ಲ. ಯಾರಿಗೂ ಕೇಳದಂತೆ ಒಬ್ಬನಿಗೆ ಹೇಳಿದರು, ಒಂದೇಬಾರಿ ಹೇಳಿದರೂ ಅದು ತನಗೆ ಅನುಗುಣವಾಗಿ, ವಿನಯವಾಗಿರುವ ಮನುಷ್ಯನಾದ ಅರ್ಜುನನಿಗೇ ಹೇಳಿದ್ದಾನೆ. ಆದರೆ ಈಗ ನಾವು ಎಲ್ಲರಿಗೂ ಹೊಸಬರಿಗೆ ಹೇಳಬೇಕು. ಅಷ್ಟೇ ಅಲ್ಲದೆ ನನ್ನ ಬೆಲೆ ತಿಳಿಯದವರಿಗೂ, ನನ್ನ ಬಗ್ಗೆ ವಿನಯ ವಿಧೇಯತೆ ಇಲ್ಲದವರಿಗೂ ಹೇಳುವುದು ಬಹಳ ಕಷ್ಟದಿಂದ ಕೂಡಿಕೊಂಡ ಕೆಲಸವೆಂದು ನನಗೂ ಸಹ ತಿಳಿದಿತ್ತು. ಆದರೂ ಇಂದೂಧರ್ಮ ಸಿದ್ಧಾಂತ ಕರ್ತನಾಗಿ ನಾನು ನಿಜ ಹೇಳದೆ ಇದ್ದರೆ ಇನ್ನು ಹೇಳುವವರೇ ಇಲ್ಲ. ಆದ್ದರಿಂದ ಗ್ರಂಥರೂಪದಲ್ಲಿ ಹೇಳುವುದು ನಡೆದಿದೆ.

ವಿಶೇಷ ಏನೆಂದರೆ ನನ್ನ ಬಗ್ಗೆ ಭಕ್ತಿ, ವಿನಯದಿಂದಿರುವವರಿಗೆ ನಾನು ಕಾಣಿಸಿದ್ದೇನೆ. ಆದರೆ ಹೊಸಬರಿಗೆ ಎಲ್ಲಿಯೂ ಕಾಣಿಸಲಿಲ್ಲ. ನನ್ನ ಗ್ರಂಥಗಳು ಓದಿದವರು ಎಷ್ಟೋಜನ ಇದ್ದಾರೆ. ನನ್ನ ಹೆಸರು ಕೇಳಿದವರು ಸಹ ಎಷ್ಟೋಜನ ಇದ್ದಾರೆ. ಆದರೂ ಯಾರು ನನ್ನನ್ನು ನೋಡಲಿಲ್ಲ. ಬಹಳಜನರು ನಮ್ಮ ಭಕ್ತರನ್ನು "ನಿಮ್ಮ ಸ್ವಾಮಿ ಯಾವ ಟಿ.ವಿ. ಛಾನಲ್‌ನಲ್ಲಿಯೂ ಕಾಣಿಸಲಿಲ್ಲವೆ" ಎಂದು ಕೇಳಿದ್ದಾರೆ. ಪ್ರಬೋಧಾನಂದ ಯೋಗೀಶ್ವರರು ಎಲ್ಲರಿಗೂ ಹೇಳುತ್ತಾನೆ, ಆದರೆ ಯಾರಿಗೂ ಕಾಣಿಸುವುದಿಲ್ಲ ಎಂದು ಅವರಿಗೆ ತಿಳಿದಿಲ್ಲ.

ಪ್ರಸ್ತುತ ಕಾಲದಲ್ಲಿ ಪ್ರಜೆಗಳಲ್ಲಿ ಆಚರಣೆ ರೂಪದಲ್ಲಿರುವ ಕಾರ್ಯಗಳು ಯಾವುವು ಧರ್ಮಗಳೋ, ಯಾವು ಧರ್ಮಗಳಲ್ಲವೊ ತಿಳಿದುಕೊಳ್ಳೋಣ. ಪ್ರತಿ ನಿತ್ಯ ಮನುಷ್ಯರು ಮಾಡುವ ಕೆಲಸಗಳನ್ನು ಕೆಲವು ದೈವ ಸಂಬಂಧವಾದವು, ಕೆಲವು ಪ್ರಪಂಚಸಂಬಂಧವಾದವೆಂದು ಎರಡು ವಿಧಗಳಾಗಿ ವಿಭಜಿಸಬಹುದು. ದೈವಸಂಬಂಧ ಕಾರ್ಯಗಳು ಜ್ಞಾನ, ಧರ್ಮಗಳಿಂದ ಕೂಡಿಕೊಂಡಿರುತ್ತವೆ. ಪ್ರಪಂಚ ಸಂಬಂಧ ಕಾರ್ಯಗಳು ನೀತಿ, ನ್ಯಾಯಗಳಿಂದ ಕೂಡಿಕೊಂಡಿರುತ್ತವೆ. ಇದರಿಂದ ಜ್ಞಾನಧರ್ಮಗಳಿಂದ ಕೂಡಿಕೊಂಡಿರುವವು ದೇವರ ಕೆಲಸಗಳೆಂದು, ನೀತಿ ನ್ಯಾಯಗಳಿಂದ ಕೂಡಿಕೊಂಡಿರುವವು ಮನುಷ್ಯ ಸಂಬಂಧ ಕೆಲಸಗಳೆಂದು ತಿಳಿಯುತ್ತಿದೆ. ಮನುಷ್ಯ ಸಂಬಂಧ ಕಾರ್ಯಗಳಲ್ಲಿ ನೀತಿ ನ್ಯಾಯದಿಂದ ಮನುಷ್ಯನಿಗೆ ಪುಣ್ಯ ಬರುತ್ತಿದೆ. ಹಾಗೆಯೇ ಅವಿನೀತಿ, ಅನ್ಯಾಯದಿಂದ ಮನುಷ್ಯನಿಗೆ ಕಾಣಿಸದ ಫಲಿತವಾದ ಪಾಪವು ಬರುತ್ತಿದೆ. ಬಡವನಿಗೆ ಆಹಾರ ಇಲ್ಲದಿರುವಾಗ ಅವನಿಗೆ ಉಚಿತವಾಗಿ ಅನ್ನ ಇಟ್ಟರೆ ಅದು ನ್ಯಾಯವಾಗುತ್ತದೆ. ಹಾಗೆ ಇಡುವುದರಿಂದ ಇಟ್ಟಿರುವ ಮನುಷ್ಯನಿಗೆ ಪುಣ್ಯ ಬರುತ್ತದೆ. ಪಾಪವಾಗಲಿ, ಪುಣ್ಯವಾಗಲಿ ಮನುಷ್ಯನನ್ನು ಮರು ಜನ್ಮಕ್ಕೆ ತೆಗೆದುಕೊಂಡು ಹೋಗಿ ಫಲಿತವಾಗಿ ಕಷ್ಟಸುಖಗಳನ್ನು ಅನುಭವಿಸುವಂತೆ ಮಾಡುತ್ತದೆ. ಪಾಪಪುಣ್ಯಗಳಿಂದ ಜನ್ಮಗಳು ಬರುತ್ತವೆ. ಪಾಪಪುಣ್ಯ ಕರ್ಮಗಳು ಇಲ್ಲದಿರುವಾಗ ಮನುಷ್ಯನಿಗೆ ಮುಕ್ತಿ ಲಭಿಸುತ್ತದೆ. ಇಲ್ಲಿ ಕೆಲವರು ಒಂದು ಪ್ರಶ್ನೆ ಕೇಳಬಹುದು. ಹಸಿದ ಮನುಷ್ಯನಿಗೆ

ಅನ್ನ ಇಡುವುದು ನ್ಯಾಯವಾದದು, ಪುಣ್ಯಬಂದಿದೆ ಅಂದಿದ್ದಾರೆ. ಹಸಿದುಗೊಂಡ ಮನುಷ್ಯನಿಗೆ ಅನ್ನ ಇಡುವುದು ನೀತಿ ಅಲ್ಲವಾ, ನ್ಯಾಯವೇನಾ ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನೀತಿ ನ್ಯಾಯ, ಜ್ಞಾನ ಧರ್ಮ ಎಂಬ ಮಾತುಗಳು ಜೋಡಿ ಪದಗಳಾಗಿ ಇವೆ. ಮಾತುಗಳ ರೂಪದಿಂದ ಹೇಳುವುದನ್ನು ನೀತಿ ಎನ್ನುತ್ತೇವೆ. ನೀತಿ ಬೋಧನೆಯ ರೂಪದಲ್ಲಿ ಇರುತ್ತದೆ. ಕೇಳಿದ ನೀತಿ ಪ್ರಕಾರ ಮಾಡುವ ಕೆಲಸವನ್ನು ನ್ಯಾಯ ಅನ್ನುತ್ತೇವೆ. ಪ್ರಪಂಚ ವಿಧಾನದಲ್ಲಿ ಒಳ್ಳೆಯದನ್ನು ಬೋಧಿಸುವುದು ನೀತಿ, ನೀತಿಯಿಂದ ನಡೆಯುವ ಕಾರ್ಯಚರಣೆಯನ್ನು ನ್ಯಾಯವೆಂದು ಹೇಳುತ್ತೇವೆ. ಹಾಗೆಯೇ ದೇವರ ವಿಷಯದಲ್ಲಿ ಬೋಧಿಸಲ್ಪಡುವ ಒಳ್ಳೆಯ ಮಾತುಗಳನ್ನು ಜ್ಞಾನ ಅನ್ನುತ್ತೇವೆ. ಕೇಳಿದ ಜ್ಞಾನದ ಪ್ರಕಾರ ಮಾಡುವ ಕಾರ್ಯಗಳನ್ನು ಧರ್ಮ ಅನ್ನುತ್ತೇವೆ. ಆದ್ದರಿಂದ ನೀತಿ ನ್ಯಾಯವೆಂದು, ಜ್ಞಾನ ಧರ್ಮಗಳೆಂದು ಜೋಡಿ ಪದಗಳಾಗಿ ಬಳಸಿದರೂ ತಪ್ಪೇನು ಇಲ್ಲ.

ಕೆಲವು ದಿನಗಳ ಕೆಳಗೆ ಒಂದು ಟಿ.ವಿ. ಛಾನಲ್‌ನಲ್ಲಿ ಒಬ್ಬ ಸ್ವಾಮೀಜಿ ಹೇಳುವ ಜ್ಞಾನವನ್ನು ಕೇಳುತ್ತಿರುವಾಗ ಆತನು ಹೇಳುವ ಮಾತುಗಳು ಜ್ಞಾನವೇ ಅಲ್ಲವೆನಿಸಿದೆ. ಏಕೆಂದರೆ! "ಬಡವರಿಗೆ ಕೊಡುವ ದಾನ ಸಾಕ್ಷಾತ್ತು ದೇವರಿಗೆ ಕೊಡುವ ಧಾನಕ್ಕೆ ಸಮಾನವಾಗುತ್ತದೆ. ಹಾಗೆ ದಾನ ಮಾಡುವುದರಿಂದ ಪುಣ್ಯ ಬರುತ್ತದೆ. ಅಂತಹ ಪುಣ್ಯದಿಂದ ಮನುಷ್ಯನಿಗೆ ಮುಕ್ತಿ ಲಭಿಸುತ್ತದೆ" ಎಂದು ಆತನು ಹೇಳಿದ್ದಾನೆ. ಆ ಮಾತುಗಳಲ್ಲಿ ನೀತಿ ಇದೆಯಾ, ಜ್ಞಾನ ಇದೆಯಾ ಎಂದು ಆಲೋಚಿಸಿದರೆ ದಾನ ಮಾಡುವುದು ಪ್ರಪಂಚ ಸಂಬಂಧ ಕಾರ್ಯವಾಗುತ್ತದೆ. ಅದು ದೇವರ ಜ್ಞಾನಕ್ಕೆ ಸಂಬಂಧಿಸಿರುವುದು ಅಲ್ಲ. ಅದು ಪ್ರಪಂಚ ಜ್ಞಾನಕ್ಕೆ ಸಂಬಂಧಿಸಿರುವುದಾಗಿರುವುದರಿಂದ ಅದನ್ನು ನೀತಿ ಅನ್ನುತ್ತೇವೆ. ನೀತಿ ಕಾರ್ಯವಾದ ದಾನದಿಂದ ಪುಣ್ಯ ಬರುವುದು ನಿಜವೆ ಆದರೂ, ಪುಣ್ಯದಿಂದ ಮುಕ್ತಿ ಬರುವುದಿಲ್ಲ. ಪುಣ್ಯದಿಂದ ಮೋಕ್ಷ ಬರುತ್ತ ದೆಂಬುವುದು ಅಜ್ಞಾನವಾಗುತ್ತದೆ, ಅಧರ್ಮವಾಗುತ್ತದೆ. ಮನುಷ್ಯ ಧರ್ಮಾ

ಚರಣೆಯಿಂದ ಜ್ಞಾನ ಶಕ್ತಿ (ಜ್ಞಾನಾಗ್ನಿ) ಲಭಿಸಿ, ಅದರಿಂದ ಮುಕ್ತಿ ಬರುವುದು ಧರ್ಮವಾಗುತ್ತದೆ. ಹಾಗೆ ಅಲ್ಲದೆ ನೀತಿ ಆಚರಣೆಯಿಂದ ಪುಣ್ಯವು ಲಭಿಸಿದರು, ಅದರಿಂದ ಮುಕ್ತಿ ಲಭಿಸುತ್ತದೆಂಬುವುದು ಅಧರ್ಮವಾಗುತ್ತದೆಂದು ಹೇಳಬಹುದು. ಈ ವಿಧವಾಗಿ ಮನುಷ್ಯರು ಭಕ್ತಿಮಾರ್ಗದಲ್ಲಿ ಆಚರಿಸುವವು ಧರ್ಮಗಳಾಗುತ್ತವೋ ಇಲ್ಲವೋ ತೀರ್ಮಾನಿಸಿ ಹೇಳಬಹುದು.

ಕೆಲವರು ಮಾನವ ಸೇವೆಯೆ ಮಾಧವ ಸೇವೆ ಎಂದು ಮನುಷ್ಯರಿಗೆ ಅನೇಕ ವಿಧಗಳಾಗಿ ಸೇವೆಗಳು ಮಾಡುತ್ತಿರುತ್ತಾರೆ. ಸಾಟಿ ಮನುಷ್ಯರಿಗೆ ಸೇವೆ ಮಾಡುವುದರಿಂದ ನಿಜವಾಗಲೂ ದೇವರಿಗೆ ಸೇವೆ ಮಾಡಿದಂತಾಗುತ್ತದೆಂದು ಮಾನವ ಸೇವೆಯೇ ಮಾಧವ ಸೇವೆ ಎಂದಿದ್ದಾರೆ. ಕೆಲವರು ಆ ವಿಧವಾಗಿ ಹೇಳುವುದಲ್ಲದೆ ಮದರ್‌ಥೆರಿಸ್ಸಾ, ಫಾದರ್ ಫೆರ್ರರ್ ಮೊದಲಾದವರು ಮನುಷ್ಯರಿಗೆ ಉಚಿತ ವೈದ್ಯಶಾಲೆಗಳು ಕಟ್ಟಿಸಿ, ವಿದ್ಯಾರ್ಥಿಗಳಿಗೆ ಉಚಿತ ಬೋಧನೆಗೋಸ್ಕರ ಸ್ಕೂಲ್‌ಗಳು, ಕಾಲೇಜ್‌ಗಳು ಕಟ್ಟಿಸಿ, ಮನೆಗಳಿಲ್ಲದ ಬಡವರಿಗೆ ಮನೆಗಳು ಕಟ್ಟಿಸಿ ಎಷ್ಟೋ ಸೇವೆಗಳು ಮಾಡಿದ್ದಾರೆ. ಒಳ್ಳೆಯ ನೀರಿನ ವಸತಿ ಇಲ್ಲದ ಗ್ರಾಮಗಳಿಗೆ ಕೆಲವು ಕೋಟಿಗಳು ಖರ್ಚುಮಾಡಿ ಕುಡಿಯುವನೀರು ತರಸಿದವರು ಇದ್ದಾರೆ. ಹೀಗೆ ಅನೇಕ ಜನ ಅನೇಕ ವಿಧಗಳ ಸೇವೆಗಳು ಮಾಡಿ ತಮ್ಮ ಜೀವನ ಧನ್ಯವಾಗಿದೆ ಎಂದು ತಮ್ಮ ಸೇವೆ ಮಾಧವಸೇವೆ ಆಗಿದೆಯೆಂದು, ಆದ್ದರಿಂದ ಜನನ ಮರಣ ಚಕ್ರದಿಂದ ತಪ್ಪಿಸಿಕೊಳ್ಳಬಹುದೆಂದುಕೊಂಡಿದ್ದಾರೆ. ಇಂತಹವರನ್ನು ಕುರಿತು ಧರ್ಮಾಧರ್ಮಗಳ ಪ್ರಕಾರ ಜ್ಞಾನಾಜ್ಞಾನಗಳ ಪ್ರಕಾರ ವಿವರಿಸಿಕೊಂಡು ನೋಡಿದರೆ ಒಬ್ಬ ಮನುಷ್ಯನಿಗೆ ಸೇವೆ ಮಾಡಿದರೂ ಅಥವಾ ಬಹಳ ಜನರಿಗೆ ಸೇವೆ ಮಾಡಿದರೂ ಅದು ಮನುಷ್ಯರಿಗೆ ಮಾಡಿದ ಸೇವೆಯೇ ಆಗುತ್ತದೆಯಾಗಲಿ, ಮಾಧವನಿಗೆ (ದೇವರಿಗೆ) ಮಾಡಿದ ಸೇವೆ ಅಲ್ಲ. ಸೇವೆ ಮಾಡುವವನ ಉದ್ದೇಶ ಹೇಗಿದ್ದರೂ, ಮಾನವನ ರೂಪದಲ್ಲಿ ಮಾಧವನನ್ನೇ ಊಹಿಸಿಕೊಂಡರೂ, ಅದು ಆತನ ಊಹೆಯಾಗಲಿ ಸತ್ಯ ಅನ್ನುವುದಕ್ಕೆ ಅವಕಾಶವಿಲ್ಲ. ಕತ್ತೆಕಾಲು ಹಿಡಿದುಕೊಂಡು ನಾನು ಕುದುರೆಕಾಲು ಹಿಡಿದು

ಕೊಂಡಿದ್ದೇನೆಂದುಕೊಂಡ ಮಾತ್ರಕ್ಕೆ, ಅದು ಸತ್ಯವಲ್ಲ. ಕತ್ತೆ ಕುದುರೆಯಲ್ಲ. ಮಾನವಸೇವೆ ಪ್ರಪಂಚ ಸಂಬಂಧವಾದುದು. ಮಾಧವಸೇವೆ ದೈವ ಸಂಬಂಧವಾದುದು. ಅದಕ್ಕೂ ಇದಕ್ಕೂ ಎಷ್ಟೋ ವ್ಯತ್ಯಾಸ ಇರುತ್ತದೆ. ಪ್ರಪಂಚ ಸಂಬಂಧ ಕೆಲಸಗಳು ಮಾಡಿ ದೇವರ ಕೆಲಸಗಳೆಂದುಕೊಳ್ಳುವುದು ಪೂರ್ತಿ ತಪ್ಪು. ಧರ್ಮಾಧರ್ಮಗಳ ಪ್ರಕಾರ ಪ್ರಪಂಚ ಸಂಬಂಧವಾದ ಕೆಲಸವಾಗು ವುದರಿಂದ, ಮಾನವಸೇವೆ ಎಲ್ಲವೂ ದಾನ ಗುಣದಿಂದ ಮಾಡುವುದರಿಂದ, ಬರುವ ಫಲಿತವು ಪುಣ್ಯವೇ ಆಗುತ್ತದೆ. ಬಂದಿರುವ ಪುಣ್ಯದಿಂದ ಸುಖಗಳನ್ನು ಅನುಭವಿಸುವುದಕ್ಕೆ ಹುಟ್ಟಬೇಕಾಗಿರುತ್ತದೆ. ಜನನ ಮರಣ ಚಕ್ರದಿಂದ ಹೊರಬೀಳಬೇಕೆಂದುಕೊಂಡು ಮಾಡುವ ಸೇವೆ ಜನನ ಮರಣಚಕ್ರದೊಳಗೆ ಇನ್ನು ಇರುಕಿಸಿದೆ. ಆದರೆ ಆ ಚಕ್ರದಿಂದ ಹೊರಬೀಳುವಂತೆ ಮಾಡಲಿಲ್ಲ. ನನ್ನ ಅನುಭವದಲ್ಲಿ ದೊಡ್ಡ ದೊಡ್ಡ ಸ್ವಾಮೀಜಿಗಳು, ವಿದೇಶಿ ಹಣ ಬರುವ ಬಾಬಾಗಳು, ಧನಿಕರು, ಮಾಧವಸೇವೆ ಎಂದು ಮಾನವಸೇವೆ ಮಾಡಿ, ಪುಣ್ಯವನ್ನು ಮೂಟೆಕಟ್ಟಿಕೊಂಡಿದ್ದಾರೆ. ಇಂತಹ ಸೇವೆಗಳು ದಾನ ಎಂಬ ಅಧರ್ಮವಾಗುತ್ತದೆ. ಆದ್ದರಿಂದ ದಾನದಿಂದ ದೇವರ ಹತ್ತಿರಕ್ಕೆ ಸೇರುವುದಕ್ಕೆ ಸಾಧ್ಯವಿಲ್ಲ.

ಕೆಲವರು ಸ್ವಾಮೀಜಿಗಳು, ಬಾಬಾಗಳು ತಮ್ಮ ಬೋಧನೆಯಲ್ಲಿ ಪ್ರೇಮ ದೇವರು ಎಂದು ಬೋಧಿಸುತ್ತಿರುತ್ತಾರೆ. ಎಲ್ಲರನ್ನು ಪ್ರೇಮದಿಂದ ನೋಡುವುದು ಮಾನವನು ಮಾಡಬೇಕಾದ ಮುಖ್ಯವಾದ ಕೆಲಸವೆಂದು ಹೇಳುತ್ತಿರುತ್ತಾರೆ. ಈ ಮಾತುಗಳು ಕೇಳುವುದಕ್ಕೆ ಬಹಳ ಒಳ್ಳೆಯ ಜ್ಞಾನದಂತೆ ಕಾಣಿಸುತ್ತಿರುತ್ತದೆ. ಆದರೆ ಆ ಮಾತನ್ನು ಆಳವಾಗಿ ಯೋಚಿಸಿ ನೋಡಿದರೆ ಪ್ರೇಮ ದೇವರು ಎನ್ನುವ ಮಾತು ಧರ್ಮವೊ, ಅಧರ್ಮವೊ ತಿಳಿದುಹೋಗುತ್ತದೆ. ಮನುಷ್ಯನ ಶರೀರದಲ್ಲಿ ಆರು ಕೆಟ್ಟ ಗುಣಗಳು, ಆರು ಒಳ್ಳೆಯ ಗುಣಗಳು ಇವೆ. ಕೆಟ್ಟ ಗುಣಗಳಿಂದ ನಡೆಯುವ ಕಾರ್ಯಗಳಿಗೆ ಫಲಿತವಾಗಿ ಪಾಪಬರುತ್ತದೆ. ಹಾಗೆಯೇ ಒಳ್ಳೆಯ ಗುಣಗಳಿಂದ ನಡೆಯುವ ಕಾರ್ಯಗಳಿಗೆ ಫಲಿತವಾಗಿ

ಪುಣ್ಯಬರುತ್ತದೆ. ಈ ವಿಧವಾಗಿ ಒಳ್ಳೆಯ ಕೆಟ್ಟ ಗುಣಗಳಿಂದ ಬರುವ ಪಾಪಪುಣ್ಯಗಳು ಮನುಷ್ಯನ ತಲೆಯಲ್ಲಿ ಸೇರಿ ನಂತರ ಜನ್ಮಗಳಲ್ಲಿ ಕಷ್ಟ ಸುಖಗಳ ರೂಪದಲ್ಲಿ ಅನುಭವಕ್ಕೆ ಬರುತ್ತದೆ. ಮನುಷ್ಯ ತಲೆಯಲ್ಲಿನ ಗುಣಚಕ್ರದಲ್ಲಿ ಕೆಟ್ಟ ಗುಣಗಳು ಆರು ಕ್ರಮವಾಗಿ 1) ಕಾಮ 2) ಕ್ರೋಧ 3) ಲೋಭ 4) ಮೋಹ 5) ಮಧ 6) ಮತ್ಸರ ಎನ್ನುವವು ಇವೆ. ಹಾಗೆಯೇ ಒಳ್ಳೆಯ ಗುಣಗಳು ಕ್ರಮವಾಗಿ 1) ದಾನ 2) ದಯೆ 3) ಔದಾರ್ಯ 4) ವೈರಾಗ್ಯ 5) ವಿನಯ 6) ಪ್ರೇಮ ಎನ್ನುವವು ಇವೆ. ಒಳ್ಳೆಯ ಗುಣಗಳಲ್ಲಿ ಪ್ರೇಮ ಎಂಬ ಗುಣವು ಇದೆ. ಕೆಟ್ಟ ಗುಣಗಳಲ್ಲಿ ಕೊನೆಯಲ್ಲಿರುವ ಮತ್ಸರ ಅಥವಾ ಅಸೂಯೆ ಎಂಬ ಗುಣಕ್ಕೆ ವಿರುದ್ಧವಾಗಿ ಪ್ರೇಮ ಗುಣವು ಇತರರ ಮೇಲೆ ಪ್ರೇಮದಿಂದ ಮಾಡುವ ಒಳ್ಳೆಯ ಕೆಲಸಗಳಿಗೆ ಪುಣ್ಯ ಬರುತ್ತದೆ. ಇದು ಪ್ರೇಮದ ನಿಜ ರೂಪವಾಗಿದ್ದು ಪ್ರೇಮವನ್ನು ದೈವವಾಗಿ ಹೇಳಿಕೊಳ್ಳುವುದು, ಪ್ರೇಮವೇ ದೇವರೆಂದು ಹೇಳುವುದು ಅಧರ್ಮವಾಗುತ್ತದೆ. ನಿಜಕ್ಕೆ ಪ್ರೇಮ ಒಂದು ಗುಣ. ಮನುಷ್ಯನಿಗಿರುವ ಪ್ರೇಮ ಹೊರಗಿನ ಪ್ರಪಂಚದಲ್ಲಿ ಪುಣ್ಯವನ್ನು ಸಂಪಾದಿಸಿಕೊಟ್ಟು ಮರುಜನ್ಮಕ್ಕೆ ಹೋಗುವಂತೆ ಮಾಡುತ್ತದೆ.

ಈಗ ಕೆಲವರು ಒಂದು ಪ್ರಶ್ನೆಯನ್ನು ಕೇಳುವುದಕ್ಕೆ ಅವಕಾಶ ಇದೆ. "ಕ್ರೈಸ್ತ ಬೋಧಕರಾದ ಫಾದರ್ಸ್, ಫಾಸ್ಟರ್‌ಗಳು ನಿನ್ನ ಪಕ್ಕದವನನ್ನು ಪ್ರೇಮಿಸು ಎಂದು ಪ್ರಭುವು ಹೇಳಿದ್ದಾನೆಂದು ಹೇಳುತ್ತಿರುತ್ತಾರೆ. ನೀವು ಹೇಳಿದಂತೆ ಪ್ರೇಮ ಎಂಬುದು ಗುಣ ಎಂದು ಅವರಿಗೆ ತಿಳಿದಿಲ್ಲವಾ! ಮೇಲಾಗಿ ಬೈಬಲ್‌ನಲ್ಲಿನ ಪಕ್ಕದವನನ್ನು ಪ್ರೇಮಿಸೆಂದು ಇರುವುದು ತಪ್ಪಾಗುತ್ತದಾ?" ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಈ ಪ್ರಶ್ನೆ ನೀವು ಕ್ರೈಸ್ತರನ್ನೆ ಕೇಳಿದ್ದರೆ ಚೆನ್ನಾಗಿತ್ತು. ಅವರಿಗೆ ಅವರ ಬೈಬಲ್‌ನಲ್ಲಿ ಹೇಳಿದ ವಿಷಯ ಇಲ್ಲಿಯವರೆಗೂ ಯಾರಿಗೂ ಅರ್ಥವಾಗಲಿಲ್ಲವೆಂದೇ ಹೇಳಬಹುದು. ದೇವರ ಧರ್ಮಗಳು ಎಲ್ಲಾ ಮತಗಳಿಗೂ ಒಂದೆಯಾಗಲಿ, ಬೇರೆ ಬೇರೆಯಾಗಿ ಇರುವುದಿಲ್ಲವೆಂದು ಮೊದಲೆ ಹೇಳಿಕೊಂಡಿದ್ದೇವೆ. ಕ್ರೈಸ್ತರಿಗೂ ಸಹ ಎಲ್ಲರಂತೆ ಅವರ ತಲೆಯಲ್ಲಿ

ಗುಣಗಳೆ ಇವೆ. ಧರ್ಮಾಧರ್ಮಗಳನ್ನು ಅನುಸರಿಸಿ ನೋಡಿದರೆ ಪ್ರೇಮದಿಂದ ಪುಣ್ಯ ಅವರಿಗೂ ಸಹ ಬರುತ್ತದೆ. ಬೈಬಲ್‌ನಲ್ಲಿ ನಿನ್ನ ಪಕ್ಕದವನನ್ನು ಪ್ರೇಮಿಸೆಂದು ಹೇಳಿರುವುದು ನಿಜವೆ. ಆದರೆ ಪಕ್ಕದವನೆಂದರೆ ಅವರಿಗೆ ಅರ್ಥವಾಗಲಿಲ್ಲ. ಮನೆಯಪಕ್ಕ ಸಂಸಾರ ಇರುವವರನ್ನು ಪಕ್ಕದವರೆಂದುಕೊಂಡಿದ್ದಾರೆ. ಬೈಬಲ್‌ನಲ್ಲಿ ಹೇಳಿರುವುದು ನಿನ್ನ ಶರೀರಕ್ಕೆ ಪಕ್ಕದವನು ಅಲ್ಲ. ನಿನಗೆ ಪಕ್ಕದವನನ್ನು ಕುರಿತು ಹೇಳಿದ್ದಾರೆ. ನೀನು ಶರೀರದಲ್ಲಿ ಇರುವವನು, ಆದ್ದರಿಂದ ಶರೀರದೊಳಗೆ ನೋಡಿಕೊಳ್ಳಬೇಕಾಗಲಿ ಹೊರಗೆ ನೋಡಿಕೊಳ್ಳಬಾರದು. ಶರೀರದಲ್ಲಿ ನೋಡಿಕೊಂಡರೆ ಜೀವಾತ್ಮನಾದ ನೀನು ಪಕ್ಕದಲ್ಲಿರುವ ಆತ್ಮವನ್ನು ಪ್ರೇಮಿಸಬೇಕೆಂದು ತಿಳಿಯುತ್ತದೆ. ಅಂತರ್ಮುಖ ಜ್ಞಾನವಿಲ್ಲದ ಕ್ರೈಸ್ತರಿಗೆ ಬೈಬಲ್‌ನಲ್ಲಿನ ವಾಕ್ಯವು ಅರ್ಥವಾಗಲಿಲ್ಲವೆಂದು ಹೇಳಬಹುದು. ಶರೀರದ ಹೊರಗಿನ ವಿಷಯ ಪ್ರಪಂಚ ವಿಷಯವಾಗುತ್ತದೆ. ಶರೀರದೊಳಗಿನ ಆತ್ಮ ವಿಷಯ ದೇವರ ವಿಷಯವಾಗುತ್ತದೆ. ಆದ್ದರಿಂದ ಹೊರಗಿನ ಪ್ರೇಮ ಅಧರ್ಮವಾಗುತ್ತದೆ. ಒಳಗಿನ ಪ್ರೇಮ ಧರ್ಮವಾಗುತ್ತದೆ ಎಂದು ತಿಳಿಯಬೇಕು. ಕ್ರೈಸ್ತರಿಗೆ, ಮುಸ್ಲಿಮ್‌ರಿಗೆ ಅಂತರ್ಮುಖ ಜ್ಞಾನ ಸ್ವಲ್ಪವೂ ಸಹ ತಿಳಿದಿಲ್ಲ. ಅವರು ಅವರ ಗ್ರಂಥಗಳಲ್ಲಿ ಹೇಳಿದ ಜ್ಞಾನ ಎಲ್ಲವನ್ನೂ ಹೊರಗಿನ ಸ್ಥೂಲ ವಿಷಯಗಳಾಗಿ ಲೆಕ್ಕಿಸಿಕೊಳ್ಳುತ್ತಾರೆ. ಆದ್ದರಿಂದ ಅವರಿಗೆ ಅವರ ಪ್ರವರ್ತಕರು ಹೇಳಿದ ಸೂಕ್ಷ್ಮಜ್ಞಾನ ತಿಳಿಯದಂತೆ ಹೋಗಿದೆ.

ನಂತರ ಹುಟ್ಟಿದ ಕ್ರೈಸ್ತ, ಇಸ್ಲಾಮ್‌ಮತದಲ್ಲಿಯೇ ಅಲ್ಲದೆ ಮೊದಲು ಹುಟ್ಟಿದ ಹಿಂದೂಮತದಲ್ಲಿಯೂ ಸಹ ಸೂಕ್ಷ್ಮಜ್ಞಾನಗಳು ತಿಳಿಯದವರು ಬಹಳಜನರಿದ್ದಾರೆ. ಅಂತಹವರಿಗೆ ಭಗವದ್ಗೀತೆಯಲ್ಲಿರುವ ಕೆಲವು ಧರ್ಮ ಯುಕ್ತವಾದ ಭಾವನೆಗಳು ತಿಳಿಯದಂತೆ ಹೋಗಿವೆ. ಹಾಗೆ ತಿಳಿಯದಂತಿರುವಾಗ, ಗೀತೆಯಲ್ಲಿ ಹೇಳಿದ ಧರ್ಮವು ಹೊರಗಿನ ಮನುಷ್ಯನಲ್ಲಿ ಅಧರ್ಮವಾಗಿ ಬದಲಾಗುವುದಕ್ಕೆ ಅವಕಾಶವಿದೆ. ಭಗವದ್ಗೀತೆಯಲ್ಲಿ ಧರ್ಮಸಂಬಂಧ ಭಾವನೆಗಳೆಷ್ಟೊ ಮನುಷ್ಯರಿಗೆ ಅಧರ್ಮಗಳಾಗಿ ಅರ್ಥವಾಗಿವೆ. ಹಾಗೆಯೇ

ಅಧರ್ಮವಿಷಯಗಳು ಧರ್ಮಗಳಾಗಿ ಅರ್ಥವಾಗಿವೆ. ಗೀತೆಯಲ್ಲಿ ಮಾನವ ಶರೀರದಲ್ಲಿ ನಿರ್ಮಿತವಾದ ಒಂದು ವಿಷಯವನ್ನು ಭಗವಂತನೇ ಹೇಳಿದರೆ ಆ ವಿಷಯದಲ್ಲಿ ಇಲ್ಲದ ಭಾವವನ್ನು ಕಲ್ಪಿಸಿಕೊಂಡು ಅರ್ಥ ಮಾಡಿಕೊಂಡಿದ್ದಾರೆ. ಆದ್ದರಿಂದ ಭಗವಂತನು ಹೇಳಿದ ಉದ್ದೇಶ ದೂರವಾಗಿದೆ, ಮನುಷ್ಯರ ಉದ್ದೇಶ ತಿಳಿಸಲಾಗಿದೆ. ಪಂಡಿತರಾದವರು ಕೆಲವರು ಭಗವದ್ಗೀತೆಯನ್ನು ಅರ್ಥ ಮಾಡಿಕೊಳ್ಳದೆ ಅವರಿಗೆ ತೋಚಿರುವುದು ಅವರು ಹೇಳುವುದರಿಂದ, ಅವರ ನಂತರ ಆ ಪಂಡಿತರು ಹೇಳಿರುವುದೆ ಎಲ್ಲರೂ ಹೇಳಿಕೊಳ್ಳುವುದು ನಡೆದಿದೆ. ಈದಿನ ಭಗವದ್ಗೀತೆಯಲ್ಲಿನ ಜ್ಞಾನವನ್ನು ಅಜ್ಞಾನವಾಗಿ ಅರ್ಥಮಾಡಿಕೊಂಡು ಅವರ ದೃಷ್ಟಿಯಲ್ಲಿ ಅದನ್ನು ದೊಡ್ಡ ಜ್ಞಾನವಾಗಿ ಹೇಳಿಕೊಳ್ಳುವುದರಿಂದ ಗೀತೆಯಲ್ಲಿನ ಧರ್ಮಗಳ ಸಾರಾಂಶವು ಇಂದಿಗೂ ತಿಳಿಯದಂತೆ ಹೋಗಿದೆ. ಗೀತೆಯಲ್ಲಿನ ಭಗವಂತನ ಮಾತುಗಳು ಹೇಗೆ ಬೇರೊಂದು ವಿಧವಾಗಿ ಅರ್ಥವಾಗಿವೆಯೋ ಉದಾಹರಣೆಗೆ ಒಂದು ಶ್ಲೋಕವನ್ನು ಹೇಳಿಕೊಳ್ಳೋಣ. ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ 13ನೇ ಶ್ಲೋಕವು ಹೀಗೆ ಇದೆ.

***ಶ್ಲೋ॥ ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।***
***ತಸ್ಯಕರ್ತಾರ ಮಪಿ ಮಾಂ ವಿದ್ಧ್ಯಕರ್ತಾರ ಮವ್ಯಯಮ್ ॥***

**ಭಾವಾರ್ಥ :** ನಾಲ್ಕು ವರ್ಣಗಳು ನನ್ನಿಂದ ಸೃಷ್ಟಿಸಲ್ಪಟ್ಟಿವೆ. ಮನುಷ್ಯನ ಕರ್ಮಗಳನ್ನನುಸರಿಸಿ, ಗುಣಗಳನ್ನನುಸರಿಸಿ ನಾಲ್ಕುವರ್ಣಗಳನ್ನು ಸೃಷ್ಟಿಸಿದ್ದೇನೆ. ಆ ವಿಧವಾಗಿ ನಾನು ಅವುಗಳಿಗೆ ಕರ್ತನಾದರೂ, ಅವ್ಯಯನಾದ ನಾನು ಅವುಗಳಿಗೆ ಕರ್ತನೆಂದು ಯಾರಿಗೂ ತಿಳಿಯದಂತೆ ಇದ್ದೇನೆ.

ಭಗವದ್ಗೀತೆಯಲ್ಲಿ ಇದು ಒಂದು ಮುಖ್ಯವಾದ ಶ್ಲೋಕ. ಈ ಶ್ಲೋಕವನ್ನು ಮೂನ್ನೂರು ಜನರಿಗಿಂತ ಹೆಚ್ಚಾಗಿ ಸಂಸ್ಕೃತ ಪಂಡಿತರಾದವರು ಕನ್ನಡದೊಳಗೆ, ಉಳಿದ ಭಾಷೆಯೊಳಗೆ ವಿವರಿಸಿ ಬರೆದಿದ್ದಾರೆ. ಯಾರು ಈ ಶ್ಲೋಕದ ಭಾವನೆಯನ್ನು ಹೇಳಿದರೂ, ಮನುಷ್ಯರ ನಾಲ್ಕು ಕುಲಗಳನ್ನು ದೇವರು ತಯಾರು

ಮಾಡಿದ್ದಾನೆಂದು, ಅದರಲ್ಲಿ ಒಂದು ಬ್ರಾಹ್ಮಣರೆಂದು, ಎರಡು ವೈಶ್ಯರೆಂದು, ಮೂರು ಕ್ಷತ್ರಿಯರೆಂದು, ನಾಲ್ಕು ಶೂದ್ರರೆಂದು ಹೇಳಲಾಗಿದೆ. ಮನುಷ್ಯರಲ್ಲಿ ಇಂದಿಗೂ ಆ ನಾಲ್ಕು ಕುಲಗಳಿರುವುದರಿಂದ ಆ ಶ್ಲೋಕದಲ್ಲಿ ಕುಲಗಳನ್ನು ಕುರಿತು ದೇವರು ಹೇಳಿದ್ದಾನೆಂದು, ದೇವರೆ ಕುಲಗಳನ್ನು ತಯಾರು ಮಾಡಿಟ್ಟಿದ್ದಾನೆಂದು ಪ್ರಜೆಗಳೆಲ್ಲರೂ ಅಂದುಕೊಂಡಿದ್ದಾರೆ. ನಿಜಕ್ಕೆ ಆ ಶ್ಲೋಕದಲ್ಲಿ ಕುಲಗಳ ಪ್ರಸಕ್ತಿಯೇ ಇಲ್ಲ. ಇಲ್ಲದ ವಿಷಯಗಳನ್ನು ಆ ಶ್ಲೋಕಕ್ಕೆ ತಗುಲಿಸುವುದರಿಂದ ಅದರಲ್ಲಿ ದೇವರು ಹೇಳಿದ ವಿಷಯ ತಿಳಿಯದಂತೆ ಹೋಗಿದೆ. ಶ್ಲೋಕದಲ್ಲಿ ನಾಲ್ಕು ವರ್ಣಗಳೆಂದು ಹೇಳಿದ್ದಾನೆ ಹೊರತು, ನಾಲ್ಕು ಕುಲಗಳೆಂದು ಅವುಗಳ ಹೆಸರುಗಳು ಇವು ಎಂದು ಎಲ್ಲಿಯೂ ಇಲ್ಲ. ಆದರೂ ಶ್ಲೋಕದಲ್ಲಿ ಇಲ್ಲದ ವಿಷಯಗಳು ಬರೆಯುವುದರಿಂದ, ಪಂಡಿತರು ತಿಳಿದು ಹೇಳಿರುತ್ತಾರೆಂದು ನಂಬಿಕೆಯಿಂದ ಎಲ್ಲರೂ ಪಂಡಿತರ ಮಾತುಗಳನ್ನೇ ನಂಬಿದ್ದಾರೆ. ಮಧ್ಯದಲ್ಲಿ ಹೇಳಿದ ಪಂಡಿತರ ಮಾತು ಅಧರ್ಮವೆಂದು ಯಾರಿಗೂ ತಿಳಿಯದಂತೆ ಹೋಗಿದೆ. ಅದರಿಂದ ದೇವರು ಹೇಳಿದ ಆ ಶ್ಲೋಕದಲ್ಲಿನ ಉದ್ದೇಶವು ಇಂದಿಗೂ ತಿಳಿಯದಂತೆ ಹೋಗಿದೆ.

ಮೇಲಿನ ಶ್ಲೋಕದಲ್ಲಿನ ಭಾವವನ್ನು ಎರಡು ಭಾಗಗಳಾಗಿ ವಿಭಜಿಸಿ ನಾವು ಹೇಳಿಕೊಳ್ಳಬಹುದು. ಆ ಭಾಗಗಳಲ್ಲಿ ಕೊನೆಯ ಎರಡು ಭಾಗದಲ್ಲಿ "ನಾಶವಿಲ್ಲದ ನಾನು ಅವುಗಳ ಕರ್ತನಾದಂತೆ ಯಾರಿಗೂ ತಿಳಿಯದಂತೆ ಇದ್ದೇನೆ." ಎಂದು ಇದೆ. ಮೊದಲ ಭಾಗದಲ್ಲಿ "ಗುಣಗಳನ್ನು, ಕರ್ಮಗಳನ್ನು ವಿಭಜಿಸಿ ಅವುಗಳ ಪ್ರಕಾರ ನಾನು ನಾಲ್ಕು ವರ್ಣಗಳಾಗಿ ಪ್ರಜೆಗಳನ್ನು ಸೃಷ್ಟಿಸಿದ್ದೇನೆ" ಎಂದು ಹೇಳಿದ್ದಾನೆ. ಆದರೆ ಸೃಷ್ಟಿಕರ್ತನಾದ ದೇವರು ಮನುಷ್ಯನಲ್ಲಿನ ಗುಣಗಳನ್ನು, ಕರ್ಮವನ್ನು ಹೇಗೆ ವಿಭಜಿಸಿದ್ದಾನೋ, ಆ ವಿಭಜನೆಯನ್ನನುಸರಿಸಿ ನಾಲ್ಕು ವರ್ಣಗಳಾಗಿ ಮನುಷ್ಯರನ್ನು ಹೇಗೆ ಹೇಳಿದ್ದಾನೋ ಯಾರಿಗೂ ತಿಳಿದಿಲ್ಲ. ಆ ಶ್ಲೋಕಕ್ಕೆ ಭಾವವನ್ನು ಬರೆದ ಪಂಡಿತರಿಗೆ ವರ್ಣಗಳೆಂದರೆ ಕುಲಗಳೆಂದು ಏಕೆ ಅರ್ಥವಾಗಿದೆಯೋ ಬೇರೆಯಾರು

ಆಲೋಚಿಸಲಿಲ್ಲ. ವರ್ಣ ಎಂದರೆ ಕುಲ ಎಂದು ಹೇಳುವುದು ತಪ್ಪಾ, ಒಪ್ಪಾ ಎಂದು ಬೇರೆಯಾರು ಯೋಚಿಸದಂತಾಗಿರುವುದರಿಂದ, ದೇವರು ಕುಲಗಳನ್ನು ಕುರಿತು ಹೇಳಿದ್ದಾನೆಂದು ಉಳಿದವರು ಸಹ ಅಂದುಕೊಂಡಿದ್ದಾರೆ. ವಾಸ್ತವಕ್ಕೆ ಹೊರಗಿನ ಕುಲಗಳ ಪ್ರಸಕ್ತಿ ಆ ಶ್ಲೋಕದಲ್ಲಿ ಇಲ್ಲ. ಶ್ಲೋಕವನ್ನು ಎರಡು ಭಾಗಗಳಾಗಿ ವಿಭಜಿಸಿ ನೋಡಿದಾಗ ಮೊದಲ ಭಾಗದಲ್ಲಿ ಕರ್ಮ ಗುಣ ವಿಭಾಗಗಳನ್ನು ಆಧಾರ ಮಾಡಿಕೊಂಡು ನಾಲ್ಕು ವರ್ಣಗಳಾಗಿ ಸೃಷ್ಟಿಸಿದ್ದೇನೆಂದು ಇದೆ. ಕರ್ಮ ಗುಣಗಳೆನ್ನುವವು ಮನುಷ್ಯನೊಳಗೆ ತಲೆಭಾಗದಲ್ಲಿರುವ ನಾಲ್ಕುಚಕ್ರಗಳಲ್ಲಿ ಕೆಳಗಿನಿಂದ ಮೊದಲನೆಯದರಲ್ಲಿ ಗುಣಗಳು, ಎರಡನೆಯದರಲ್ಲಿ ಕರ್ಮಗಳು ನಿಲ್ಲುತ್ತವೆ. ಬ್ರಹ್ಮ, ಕಾಲ, ಕರ್ಮ, ಗುಣ ಎಂಬ ಹೆಸರಿರುವ ನಾಲ್ಕುಚಕ್ರಗಳಲ್ಲಿ ಕೆಳಗಿನ ಚಕ್ರದಲ್ಲಿ ಒಟ್ಟು ನಾಲ್ಕು (4) ಭಾಗಗಳು ಇವೆ. ಅದರ ಮೇಲಿರುವ ಕರ್ಮಚಕ್ರದಲ್ಲಿ ಒಟ್ಟು ಹನ್ನೆರಡು (12) ಭಾಗಗಳು ಇವೆ. ಕರ್ಮಚಕ್ರದಲ್ಲಿನ ಹನ್ನೆರಡು ಭಾಗಗಳಲ್ಲಿ ಒಂದೊಂದರಲ್ಲಿ ಒಂಭತ್ತು ವಿಧಗಳ ಕರ್ಮಗಳ ಪ್ರಕಾರ ಒಟ್ಟು 108 ವಿಧಗಳ ಕರ್ಮಗಳು ಇವೆ. ಕೆಳಗೆ ಗುಣಚಕ್ರದಲ್ಲಿ ಹೊರಗಿನಿಂದ ಮೊದಲ ಮೂರು ಭಾಗದಲ್ಲಿ ಒಂದೊಂದರಲ್ಲಿ ಹನ್ನೆರಡು (12) ವಿಧಗಳ ಗುಣಗಳು ಇವೆ. ಅದರಲ್ಲಿ ಆರು ಒಳ್ಳೆಯಗುಣಗಳು, ಆರು ಕೆಟ್ಟಗುಣಗಳು ಇರುತ್ತವೆ. ಈ ವಿಧವಾಗಿ ಮೂರು ಭಾಗಗಳಲ್ಲಿ 36 ಗುಣಗಳಿವೆ. ಇನ್ನು ಮಧ್ಯದಲ್ಲಿರುವ ನಾಲ್ಕನೆಯ ಭಾಗದಲ್ಲಿ ಯಾವ ಗುಣವೂ ಇರುವುದಿಲ್ಲ. ಹೀಗೆ ಮೂರು ಗುಣಗಳಿದ್ದರೂ, ಒಂದು ಗುಣವಿಲ್ಲದ ಒಟ್ಟು ನಾಲ್ಕು ಭಾಗಗಳು ಗುಣಚಕ್ರದಲ್ಲಿ ಇವೆ. ಈ ಗುಣಚಕ್ರದ ಭಾಗಗಳಲ್ಲಿಯೆ ಪ್ರತಿ ಶರೀರದಲ್ಲಿ ಜೀವಿಯೂ ಇರುತ್ತಾನೆ. ನಾಲ್ಕು ಭಾಗಗಳಲ್ಲಿ ಜೀವಿಯು ಮೇಲಿರುವ ಕರ್ಮವನ್ನನುಸರಿಸಿ ನಿವಾಸ ಇರುತ್ತಾನೆ. ಯಾವ ಭಾಗದಲ್ಲಿ ಜೀವಿಯು ನಿವಾಸವಿದ್ದರೆ ಆ ಗುಣವೊಂದರ ಹೆಸರು ಆತನಿಗೆ ಹೇಳಲಾಗುತ್ತದೆ.

ಗುಣಚಕ್ರದಲ್ಲಿನ ನಾಲ್ಕು ಭಾಗಗಳನ್ನು ನಾಲ್ಕು ವರ್ಣಗಳಾಗಿ ದೇವರು ವಿಭಜಿಸಿ ಶ್ಲೋಕದಲ್ಲಿ ಹೇಳಿದ್ದಾನೆ. ಮೇಲಿರುವ ಕರ್ಮವನ್ನನುಸರಿಸಿ ಕೆಳಗಿರುವ

ಗುಣಗಳ ಭಾಗಗಳಲ್ಲಿ ಜೀವಿ ಇರುತ್ತಾನೆ. ಜೀವಿ ಇರುವ ಗುಣಭಾಗಗಳ ಹೆಸರುಗಳಿಂದ ಇವನು ಇಂತಹ ವರ್ಣದವನೆಂದು ಹೇಳಲಾಗುತ್ತಿದೆ. ವರ್ಣ ಎಂದರೆ ಗುಣಭಾಗದ ಹೆಸರು. ನಾಲ್ಕು ಭಾಗಗಳಿಗೆ ನಾಲ್ಕು ಹೆಸರುಗಳಿರುವು ದರಿಂದ ಅವುಗಳನ್ನೇ ನಾಲ್ಕು ವರ್ಣಗಳೆಂದು ಹೇಳಲಾಠಗಿದೆ. ಮನುಷ್ಯನ ಶರೀರದಲ್ಲಿ ಜೀವಿಯು ಯಾವ ಗುಣಭಾಗದಲ್ಲಿದ್ದರೆ ಆ ಗುಣಭಾಗದ ಹೆಸರು ಆತನಿಗೆ ಬರುತ್ತಿದೆ. ಗುಣಭಾಗಗಳನ್ನು ಅನುಸರಿಸಿ ಹೊರಗಿನಿಂದ ಮೊದಲ ಭಾಗದಲ್ಲಿರುವವನು ತಾಮಸನೆಂದು, ಎರಡನೆ ಭಾಗದಲ್ಲಿರುವವನು ರಾಜಸನೆಂದು, ಮೂರನೆ ಭಾಗದಲ್ಲಿರುವವನು ಸಾತ್ತ್ವಿಕನೆಂದು, ನಾಲ್ಕನೆ ಭಾಗದಲ್ಲಿರುವವನು ಯೋಗಿ ಎಂದು ಹೇಳಲಾಗುತ್ತದೆ. ದೇವರ ಉದ್ದೇಶದಲ್ಲಿ ತಾಮಸ, ರಾಜಸ, ಸಾತ್ತ್ವಿಕ, ಯೋಗಿ ಎನ್ನುವ ನಾಲ್ಕುವರ್ಣದವರಿದ್ದಾರೆಂದು ಶ್ಲೋಕದಲ್ಲಿ ಹೇಳಿದಾಗ, ಮನುಷ್ಯ ತನ್ನ ಇಷ್ಟಬಂದಂತೆ ಅವುಗಳನ್ನು ಹೊರಗೆ ಕುಲಗಳಾಗಿ ಹೇಳಿಕೊಂಡಿದ್ದಾನೆ. ಇಲ್ಲಿ ದೇವರು ಹೇಳಿರುವುದು ಧರ್ಮಕ್ಕೆ ಸಂಬಂಧಿಸಿರುವ ಜ್ಞಾನವಾಗಿದ್ದು, ಮನುಷ್ಯ ಹೇಳಿರುವುದು ಪೂರ್ತಿ ಅಧರ್ಮಸಂಬಂಧ ಅಜ್ಞಾನವಾಗುತ್ತದೆ. ದೇವರು ಮನುಷ್ಯನೊಳಗೆ ಜ್ಞಾನದ ಪ್ರಕಾರ ಹೇಳಿದ್ದಾನಾಗಲಿ, ಹೊರಗಿನ ಕುಲಗಳನ್ನು ಏರ್ಪಡಿಸಲಿಲ್ಲ. ಶ್ಲೋಕದಲ್ಲಿ ಇಲ್ಲದ ಕುಲಗಳ ಹೆಸರುಗಳನ್ನು ಇಟ್ಟು ಬ್ರಾಹ್ಮಣರು, ವೈಶ್ಯರು, ಕ್ಷತ್ರಿಯರು, ಶೂದ್ರರು ಎಂದು ವಿಭಜಿಸಿ ಶೂದ್ರರು ಮುಟ್ಟಬಾರದವರೆಂದು ಹೇಳುವುದು ಹೊರಗೆ ಪೂರ್ತಿ ಅನ್ಯಾಯ. ಒಳಗೆ ಪೂರ್ತಿ ಅಧರ್ಮವಾಗುತ್ತದೆ. ಕುಲ ವ್ಯವಸ್ಥೆಗಳನ್ನು ದೇವರು ಇಡಲಿಲ್ಲ. ಶೂದ್ರರು ಅಂಟಬಾರದವರೆಂದು ಗುಡಿಯಲ್ಲಿನ ಪ್ರಸಾದವನ್ನೂ ಸಹ ಮೇಲಕ್ಕೆ ಎತ್ತಿಹಾಕುವುದು ದೇವರು ಒಪ್ಪಿಕೊಳ್ಳದ ಅಧರ್ಮವಾಗುತ್ತದೆ. ದೇವರು ಭಗವದ್ಗೀತೆಯಲ್ಲಿ ಚಾತುರ್ವರ್ಣ್ಯಂ ಎಂಬ ಶ್ಲೋಕವನ್ನು ಧರ್ಮಯುಕ್ತವಾಗಿ ಹೇಳಿದರೆ ಮನುಷ್ಯ ತನ್ನ ಸ್ವಾರ್ಥದಿಂದ ಅಧರ್ಮವಾಗಿ ಬದಲಿಸಿದ್ದಾನೆಂದು ತಿಳಿಯುತ್ತಿದೆ. ಈಗ ಧರ್ಮಕ್ಕೂ, ಅಧರ್ಮಕ್ಕೂ ಇರುವ ವ್ಯತ್ಯಾಸ ಸ್ವಲ್ಪ ತಿಳಿದಿದೆಯೆಂದುಕೊಳ್ಳುತ್ತೇನೆ. ಇದೇ

ವಿಧವಾಗಿ ಮನುಷ್ಯರು ಮಾಡುವ ಅಧರ್ಮಗಳು ಹೇಗೆ ಇವೆಯೋ ಪುನಃ ಕೆಲವು ವಿಷಯಗಳನ್ನು ವಿಶಧೀಕರಿಸಿಕೊಂಡು ನೋಡೋಣ.

ಸುಮಾರು ಮೂವತ್ತು (30) ವರ್ಷಗಳ ಕೆಳಗೆ ಒಂದು ಉನ್ನತವಾದ ವ್ಯಕ್ತಿ, ಬ್ರಹ್ಮಕುಮಾರಿ ಸಮಾಜ (ಓಂಶಾಂತಿ) ದಲ್ಲಿ ಜ್ಞಾನವನ್ನು ತಿಳಿದುಕೊಂಡ ವ್ಯಕ್ತಿ, ತಾನು ಪೂರ್ತಿ ಜ್ಞಾನಿಯೆಂದು ತಿಳಿದ ವ್ಯಕ್ತಿ, ಒಂದು ದಿನ ನನ್ನನ್ನು ಹೀಗೆ ಕೇಳಿದನು.

**ಆತನು :–** ನೀವು ವೇದಗಳನ್ನು ಓದಿದ್ದೀರಾ?

**ನಾನು :–** ಇಲ್ಲ. ಓದಲಿಲ್ಲ.

**ಆತನು :–** ವೇದಗಳನ್ನು ಓದದೆ ನೀವು ಸ್ವಾಮಿ ಹೇಗಾಗಿದ್ದೀರಾ?

**ನಾನು :–** ನಾನು ಸ್ವಾಮಿ ಎಂದು ಯಾರ ಹತ್ತಿರವು ಇಲ್ಲಿಯವರೆಗೂ ಹೇಳಲಿಲ್ಲ. ಹೊರಗೆ ಅವರೆ ನನ್ನನ್ನು ಸ್ವಾಮಿ ಎನ್ನುತ್ತಿರುತ್ತಾರೆ. ವಾಸ್ತವಕ್ಕೆ ನಾನು ಯೋಗಿ, ಸ್ವಾಮಿಯಲ್ಲ. ಒಂದು ವಿಧವಾಗಿ ನನಗೆ ಸಂಸ್ಕೃತ ಭಾಷೆ ಬರುವುದಿಲ್ಲ. ಆದ್ದರಿಂದ ವೇದಗಳನ್ನು ಓದಲಿಲ್ಲ. ಎರಡನೆ ಕಾರಣ ವೇದಗಳು ಓದುವುದರಿಂದ, ಅವುಗಳನ್ನು ತಿಳಿಯುವುದರಿಂದ ದೇವರು ತಿಳಿಯುವುದಿಲ್ಲ. ಮೂರನೇ ಕಾರಣ ವೇದಗಳು ಅಧರ್ಮಗಳು ಆದ್ದರಿಂದ ಓದಲಿಲ್ಲ.

**ಆತನು :–** ವೇದಗಳು ಅಧರ್ಮಗಳಾ? ಒಟ್ಟಾರೆ ಭಾರತದೇಶದಲ್ಲಿ ಯಾರು ಇಲ್ಲಿಯವರೆಗೂ ಈ ಮಾತುಗಳನ್ನು ಹೇಳಲಿಲ್ಲ. ಯಾರು ಹೇಳದ ವಿಷಯಗಳನ್ನು ನೀವು ಒಬ್ಬರೇ ಹೇಳುವುದೇನು? ಇಲ್ಲಿಯವರೆಗೂ ಎಷ್ಟೋಜನ ಜ್ಞಾನಿಗಳು, ಸ್ವಾಮಿಗಳು ಪ್ರತಿನಿತ್ಯ ವೇದಪಾರಾಯಣ ಮಾಡುತ್ತಿದ್ದಾರೆ. ವೇದಗಳನ್ನು ಕಲಿಯುವುದಕ್ಕೆ ವೇದಪಾಠಶಾಲೆಗಳನ್ನು ಸ್ಥಾಪಿಸಿದ್ದಾರೆ. ಪ್ರತಿ ಪೂಜೆಯಲ್ಲಿಯೂ, ಪ್ರತಿ ಯಜ್ಞದಲ್ಲಿಯೂ ವೇದಮಂತ್ರಗಳು ಇಲ್ಲದ್ದು ಕೆಲಸವೇ ನಡೆಯುವುದಿಲ್ಲ. ಭಾರತದೇಶ ಸಂಸ್ಕೃತಿಗೆ ವೇದಗಳು ನಿದರ್ಶನ ಎಂದಿದ್ದಾರೆ. ವ್ಯಾಸನು ವೇದಗಳನ್ನು ಬರೆದು ವೇದವ್ಯಾಸನೆಂದು ಹೆಸರುವಾಸಿಯಾದರು, ಅಷ್ಟುದೊಡ್ಡವರು ವೇದಗಳನ್ನು ಕೊಂಡಾಡುತ್ತಿರುವಾಗ, ನೀನು ಒಬ್ಬನೇ ವೇದಗಳು ಅಧರ್ಮಗಳು

ಅನ್ನುವುದು ವಿಚಿತ್ರವಾಗಿದೆ. ನೀನು ಈ ಮಧ್ಯಕಾಲದಲ್ಲಿ ಇತರ ಮತಗಳಲ್ಲಿ ಸೇರಲಿಲ್ಲ ಅಲ್ಲವೆ! ಒಂದುಕಡೆ ನೋಡಿದರೆ ನೀನು ಸಾಮಾನ್ಯವಾದ ವ್ಯಕ್ತಿಯೂ ಸಹ ಅಲ್ಲ. ನಿನ್ನ ಮಾತಿಗೆ ದೇವತೆಗಳು, ದೆವ್ವಗಳು ಭಯಪಡುವುದು ನಾನು ಸ್ವತಃ ನೋಡಿದ್ದೇನೆ. ಅಂತಹ ದೊಡ್ಡ ವ್ಯಕ್ತಿಯೂ ನೀನು ಹೀಗೆ ಹೇಳುವುದೇನು?

**ನಾನು :–** ಈ ದೇಶದಲ್ಲಿನ ಮನುಷ್ಯರು ವೇದಗಳಲ್ಲಿ ಎಷ್ಟರಮಟ್ಟಿಗೆ ಲೀನವಾಗಿದ್ದಾರೊ ನನಗೆ ಚೆನ್ನಾಗಿ ತಿಳಿದಿದೆ. ಪ್ರಜೆಗಳಲ್ಲಿ ಎಷ್ಟೋ ಗೌರವಿರುವ ವೇದಗಳನ್ನು ಅಧರ್ಮಗಳೆಂದು ನಾನು ಅನ್ನುವುದು ನಿಮಗೂ ಸಹ ನೊವುಂಟಾದರೂ, ಎಲ್ಲರ ಒಳ್ಳೆಯದನ್ನು ಭಯಸುವವನಾಗಿ ಹೇಳದೆ ತಪ್ಪಲಿಲ್ಲ. ಈ ಮಾತು ನಾನು ಸ್ವತಃ ಹೇಳುವುದು ಅಲ್ಲ. ದೈವಾಂಶಸಂಭೂತನಾದ ಭಗವಾನನು ಕೃಷ್ಣನಾಗಿ ಬಂದಾಗ ಭಗವದ್ಗೀತೆಯಲ್ಲಿ ಹೇಳಿದ ವಿಷಯವನ್ನು ಹೇಳುತ್ತಿದ್ದೇನೆ. ಭಾರತದೇಶದಲ್ಲಿ ವೇದಗಳನ್ನು ಓದದೇ ಆಧ್ಯಾತ್ಮಿಕವು ತಿಳಿಯುವುದಿಲ್ಲ ಎಂದು ಕೆಲವರನ್ನುತ್ತಿದ್ದಾರೆ. ನೀವು ಹೇಳಿದಂತೆ ವೇದಗಳ ಮಂತ್ರಗಳು ಓದದೇ ಯಾವ ಶುಭಕಾರ್ಯವು ಮಾಡಬಾರದೆಂದು ಎಲ್ಲರೂ ಅಂದುಕೊಳ್ಳುತ್ತಿದ್ದಾರೆ. ಈ ಮಧ್ಯಕಾಲದಲ್ಲಿ ಅಮೇರಿಕಾ ದೇಶದಲ್ಲಿಯೂ ಸಹ ಅಮೇರಿಕಾ ಪ್ರೆಸಿಡೆಂಟ್ ಹೊಸದಾಗಿ ತನ್ನ ಸೀಟಿನಲ್ಲಿ ಕುಳಿತುಕೊಳ್ಳುವಾಗ ಭಾರತದೇಶದಿಂದ ಹೋದ ವೇದಪಂಡಿತರಿಂದ ವೇದಮಂತ್ರಗಳನ್ನು ಪಾರಾಯಣ ಮಾಡಿಸಿ ತನ್ನ ಪದವಿಯನ್ನು ಸ್ವೀಕರಿಸಿದ್ದಾನಂತೆ. ಇದರಿಂದ ವೇದಮಂತ್ರಗಳ ಮೇಲೆ ವಿದೇಶಿಯರಿಗೂ ಸಹ ಮೋಜುಹುಟ್ಟಿದೆ ಎಂದು ಅರ್ಥವಾಗುತ್ತಿದೆ. ಇನ್ನು ಹೊಸ ವಿಷಯವೇನೆಂದರೆ ಕ್ರೈಸ್ತರು, ಮುಸ್ಲಿಮ್‌ರು ವೇದಮಂತ್ರಗಳನ್ನು ಓದಿ ಅದರಲ್ಲಿನ ತಮ್ಮ ಪ್ರಭುವನ್ನು ಕುರಿತು ಇದೆಯೆಂದು ಕ್ರೈಸ್ತರು ಅನ್ನುತ್ತಿರುವಾಗ, ಮುಸ್ಲಿಮ್‌ರು ಸಹ ವೇದಗಳಲ್ಲಿ ತಮ್ಮ ಪ್ರವಕ್ತನನ್ನು ಕುರಿತು ಇದೆಯೆಂದು ಹೇಳುತ್ತಿದ್ದಾರೆ. ಹಾಗೆ ಹೇಳುವುದೇ ಅಲ್ಲದೆ ವೇದಗಳ ಮಂತ್ರಗಳನ್ನು ಧಾರಾಳವಾಗಿ ಹೇಳುವ ಮುಸ್ಲಿಮ್‌ರನ್ನೂ ಸಹ ನೋಡಿದ್ದೇನೆ. ಪೂರ್ವದಿಂದ ಹಿಂದೂಗಳಲ್ಲಿ ಹೆಸರುವಾಸಿಯಾದ ವೇದಗಳನ್ನು ಈ ದಿನ

ಮುಸ್ಲಿಮ್‌ರು, ಕ್ರೈಸ್ತರು ಓದುತ್ತಿದ್ದಾರೆ. ಮನುಷ್ಯರು ಯಾವುದು ದೊಡ್ಡದೆಂದು ಕೊಂಡರೂ ಅದನ್ನು ಕುರಿತು ದೇವರು ಏನು ಹೇಳುತ್ತಿದ್ದಾನೋ ನೋಡಬೇಕು. ದೇವರು ಧರ್ಮವೆಂದು ಹೇಳಿದ ವಿಷಯವನ್ನು ಮನುಷ್ಯರೆಲ್ಲರೂ ತಿರಸ್ಕರಿಸಿದರೂ ಪರವಾಗಿಲ್ಲ. ದೇವರು ಏನನ್ನು ಧರ್ಮವೆಂದು ಹೇಳಿದ್ದಾನೋ ಅದನ್ನೇ ಸ್ವೀಕರಿಸುತ್ತೇನೆ. ಹಾಗೆಯೆ ಮನುಷ್ಯರೆಲ್ಲರೂ ಆಮೋದಿಸಿ ಗೌರವಿಸುವ ವಿಷಯವನ್ನು ದೇವರು ಅಧರ್ಮವೆಂದು ಹೇಳಿದರೆ, ಅದನ್ನು ತಿರಸ್ಕರಿಸುವು ದಲ್ಲದೆ, ಅದೇ ವಿಷಯವನ್ನು ಎಲ್ಲರಿಗೂ ತಿಳಿಯುವಂತೆ ಹೇಳುತ್ತೇನೆ.

ದೇವರು ತನ್ನ ಬೋಧನೆಯಲ್ಲಿ ನಾಲ್ಕು ಅಧರ್ಮಗಳನ್ನು ಕುರಿತು ಹೇಳುವಾಗ, ವೇದಗಳು ಸಹ ಅಧರ್ಮಗಳೇ ಎಂದು ನಾಲ್ಕರಲ್ಲಿ ಒಂದು ಅಧರ್ಮವಾಗಿ ಭಗವಂತನು ಹೇಳಿದ್ದಾನೆ. ವೇದಗಳಿಂದ ನಾನು ತಿಳಿಯುವುದಿಲ್ಲ ಎಂದು ದೇವರೆ ಸ್ವತಃ ಹೇಳಿದಾಗ ಅದನ್ನು ಕೇಳಿದ ನಂತರವೂ ಸಹ ವೇದಗಳನ್ನು ಆಶ್ರಯಿಸಿರುವುದು ಅದಕ್ಕಿಂತ ಅಜ್ಞಾನ ಇಲ್ಲವೆಂದೇ ಹೇಳಬಹುದು. ದೇವರು ಯಾವುದರಿಂದ ನನ್ನನ್ನು ತಿಳಿಯಲಾರರೆಂದು ಹೇಳಿದ್ದಾನೋ, ಅದನ್ನು ಬಿಡದಂತಿರುವುದರಿಂದ ದೇವರನ್ನು ಅಗೌರವಪಡಿಸಿದಂತೆ ಅಲ್ಲವೆ! ದೇವರ ಮಾತನ್ನು ತಿರಸ್ಕರಿಸಿದಂತೆ ಅಲ್ಲವೆ! ದೇವರ ಭಕ್ತರು, ದೇವರ ಜ್ಞಾನಿಗಳು, ದೇವರ ಜ್ಞಾನದಲ್ಲಿ ಮುಳುಗಿದ್ದೇವೆ, ದೇವರನ್ನು ಪ್ರತ್ಯಕ್ಷವಾಗಿ ನೋಡುತ್ತಿದ್ದೇವೆ ಎಂದು ತಮ್ಮನ್ನು ತಾವು ದೊಡ್ಡದಾಗಿ ಹೇಳಿಕೊಳ್ಳುವ ಜ್ಞಾನಿಗಳು, ಏಕೆ ದೇವರು ಬೇಡ ಎಂದು ಹೇಳಿದರು ವೇದಗಳನ್ನು ಬಿಡದಂತಿದ್ದಾರೆ? ಎಂದು ಪ್ರಶ್ನಿಸಿಕೊಂಡರೆ ಅದಕ್ಕೆ ಒಂದೇ ಒಂದು ಉತ್ತರ ದೊರೆಯುತ್ತದೆ. ಅದೇನೆಂದರೆ! ದೇವರು ಹೇಳಿದ ಧರ್ಮಗಳು ಮನುಷ್ಯರಿಗೆ ಅರ್ಥವಾಗಲಿಲ್ಲವೆಂದು ತಿಳಿಯುತ್ತಿದೆ.

**ಆತನು :–** ನೀವು ಅನ್ನುವಂತೆ ದೇವರು ಹೇಳಿದ ಧರ್ಮಗಳು ಕೆಲವರಿಗೆ ಅರ್ಥವಾಗಲಿಲ್ಲವೆಂದು ಹೇಳಿದರೆ ಒಪ್ಪಿಕೊಳ್ಳಬಹುದು. ಇಷ್ಟುಜನ ಸಣ್ಣ ದೊಡ್ಡ ಸ್ವಾಮಿಗಳು, ಗುರುಗಳು, ಪೀಠಾಧಿಪತಿಗಳು, ಬ್ರಾಹ್ಮಣರು, ವೇದಪಂಡಿತರು

ಒಟ್ಟಾರೆ ಎಲ್ಲರಿಗೂ ತಿಳಿಯದಂತೆ ಹೋಗುವುದಕ್ಕೆ ಕಾರಣವೇನಿರುತ್ತದೆ? ನೀವು ಹೇಳುವ ಮಾತುಗಳು ನನಗೆ ಒಂದುಕಡೆ ಸತ್ಯವೆನಿಸಿದರು, ಮತ್ತೊಂದು ಕಡೆ ನಂಬುವುದಕ್ಕೆ ಆಗದಂತೆ ಇದೆ. ಅಷ್ಟೇ ಅಲ್ಲದೆ ನಿಮ್ಮ ಮಾತು ಕೇಳಬಾರದೆಂದು ಒಳಗೆ ಯಾರೋ ಬಲವಾಗಿ ಹೇಳಿದಂತೆ, ನೀವು ಹೇಳುವುದು ಮನುಷ್ಯರನ್ನು ತಪ್ಪುದಾರಿಯಲ್ಲಿ ಕಳಿಹಿಸುವುದಕ್ಕೆ ಎನ್ನುವಂತೆ ಅನಿಸುತ್ತಿದೆ. ನಿಜನಾ, ಸುಳ್ಳಾ ಎಂದು ಯೋಚಿಸುವ ನನಗೆ ಯೋಚಿಸದಂತೆ ನಿಮ್ಮ ಮಾತು ತಪ್ಪೆಂದು ಏಕೆ ಅನಿಸುತ್ತಿದೆ?

**ನಾನು :–** ನಿಮಗೆ ಹಾಗೆ ಏಕೆ ಅನಿಸುತ್ತಿದೆಯೋ ವಿವರವಾಗಿ ಹೇಳುತ್ತೇನೆ ಚೆನ್ನಾಗಿ ಕೇಳಿ. ವೇದಗಳಿಂದ ನನ್ನನ್ನು ತಿಳಿಯಲಾರರೆಂದು ಹೇಳುವುದಲ್ಲದೆ, ವೇದಗಳ ನಿಜ ಸ್ವರೂಪವನ್ನು ಕುರಿತು ಭಗವದ್ಗೀತೆಯಲ್ಲಿಯೆ ಮತ್ತೊಂದು ಕಡೆ ಸಾಂಖ್ಯಯೋಗವೆಂಬ ಅಧ್ಯಾಯದಲ್ಲಿ 45ನೇ ಶ್ಲೋಕದಲ್ಲಿ...

***ಶ್ಲೋ॥ ತ್ರೈಗುಣ್ಯ ವಿಷಯಾವೇದಾ ನಿಸ್ತ್ರೈಗುಣ್ಯೋ ಭವಾರ್ಜುನ!***
***ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್॥***

**ಭಾವಾರ್ಥ :–** "ವೇದಗಳೆಂದರೆ ಮೂರು ಗುಣವಿಷಯಗಳೆ, ಆ ಮೂರು ಗುಣಗಳನ್ನು ಬಿಡಬೇಕು. ರಾಗದ್ವೇಷಗಳನ್ನು ದ್ವಂದ್ವಗಳು ಇಲ್ಲದಂತೆ ಯೋಗಿಯಾಗಿರು."

ವಿಜ್ಞಾನಯೋಗ 13, 14...

***ಶ್ಲೋ॥ ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।***
***ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥***

**ಶ್ಲೋ॥** ***ದೈವೀ ಹ್ಯೇಷಾ ಗುಣಮಯೀ ಮಮಮಾಯಾ ದುರತ್ಯಯಾ ।***
***ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥***

**ಭಾವಾರ್ಥ :–** ಈ ಜಗತ್ತಿನಲ್ಲಿನ ಮನುಷ್ಯರೆಲ್ಲರೂ ಮೂರು ಗುಣಗಳಲ್ಲಿದ್ದು,

ಆ ಗುಣಗಳ ಪ್ರಭಾವದಲ್ಲಿ ಸಿಲುಕಿಕೊಂಡಿದ್ದು ನಾನು ನಾಶ ಇಲ್ಲದವನೆಂದು, ನನ್ನ ಮಹಿಮೆ ದೊಡ್ಡದೆಂದು ತಿಳಿಯದಂತಿದ್ದಾರೆ. ನಾನು ನನ್ನ ಮಾಯೆಯನ್ನು ಗುಣಗಳರೂಪದಲ್ಲಿ ತಯಾರುಮಾಡಿಟ್ಟಿದ್ದೇನೆ. ಅದನ್ನು ದಾಟುವುದಕ್ಕೆ ಯಾರಿಗೂ ಸಾಧ್ಯವಾಗುವುದಿಲ್ಲ. ಯಾರಾದರೆ ನನ್ನನ್ನು ಆರಾಧಿಸುತ್ತಾರೋ ಅವನು ಮಾತ್ರ ಗುಣಗಳನ್ನು ಮಾಯೆಯನ್ನು ಸುಲಭವಾಗಿ ದಾಟಿಹೋಗುತ್ತಾನೆ.

ಭಗವದ್ಗೀತೆಯಲ್ಲಿ ಈ ಮೂರು ಶ್ಲೋಕಗಳನ್ನು ಪರಿಶೀಲಿಸಿದರೆ ಯಾರಿಗೂ ತಿಳಿಯದ ದೊಡ್ಡ ರಹಸ್ಯ ತಿಳಿಯುತ್ತದೆ. ಪ್ರಪಂಚದಲ್ಲಿನ ಮನುಷ್ಯರೆಲ್ಲರನ್ನು ನಂಬಿಸಿ, ನೀನು ಸರಿಯಾದ ಮಾರ್ಗದಲ್ಲಿಯೆ ಇದ್ದೀಯೆಂದು ನಂಬಿಸಿ, ದೇವರಕಡೆ ಹೋಗದಂತೆ ಮೋಸಮಾಡಿ, ಪ್ರಪಂಚದ ವಿಷಯದಲ್ಲಿಯೆ ಮುಳುಗಿಸುವ ಮಾಯೆಯನ್ನು ದೇವರೇ ಸೃಷ್ಟಿಸಿದ್ದಾನೆ. ಆ ಮಾಯೆ ಪ್ರತಿ ಮನುಷ್ಯನ ತಲೆಯಲ್ಲಿ ಗುಣಚಕ್ರದಲ್ಲಿನ ಮೂರು ಗುಣಗಳ ರೂಪದಲ್ಲಿದೆ. ಪ್ರತಿ ಮನುಷ್ಯನಿಗೂ ಮಾಯೆ ಅವನ ತಲೆಯಲ್ಲಿಯೇ ಗುಣಗಳರೂಪದಲ್ಲಿದ್ದು ದೇವರ ಜ್ಞಾನವನ್ನು ಅರ್ಥವಾಗದಂತೆ, ದೇವರ ಧರ್ಮಗಳು ತಿಳಿಯದಂತೆ ಮಾಡುತ್ತಿದೆ. ದೇವರ ಜ್ಞಾನ ತಿಳಿಯಬೇಕೆಂದರೆ ಯಾವ ಮನುಷ್ಯನಾದರೂ ಮಾಯೆಯನ್ನು ಜಯಿಸಿ, ಅದನ್ನು ದಾಟಿ ಹೋಗಬೇಕು. ಹಾಗೆ ಮಾಯೆಯನ್ನು ದಾಟಿಹೋಗುವುದು ಅಸಾಧ್ಯವಾದ ಕೆಲಸ ಎಂದು ದೇವರೇ ಶ್ಲೋಕದಲ್ಲಿ ತಿಳಿಸಿದ್ದಾನೆ. ಈ ಜಗತ್ ಎಲ್ಲವೂ ಮೂರು ಗುಣಗಳಾದ ತಾಮಸ, ರಾಜಸ, ಸಾತ್ತ್ವಿಕ ಗುಣಗಳಲ್ಲಿ ಸಿಲುಕಿಕೊಂಡಿದೆ. ಆದ್ದರಿಂದ ಗುಣಗಳೆನ್ನುವ ಮಾಯೆಯಲ್ಲಿ ಸಿಲುಕಿಕೊಂಡಿರುವುದರಿಂದ, ಯಾವ ಮನುಷ್ಯನು ದೇವರನ್ನು ಕುರಿತು ತಿಳಿಯದೆ ಹೋಗುತ್ತಿದ್ದಾನೆ. ಮಾಯೆ ಎಂಬುದು ಯಾರನ್ನು ಬಿಡದ ಶಕ್ತಿಯೆಂದು, ಅದನ್ನು ಜಯಿಸುವುದಕ್ಕೆ ಯಾರಿಗೂ ಸಾಧ್ಯವಾಗುವುದಿಲ್ಲವೆಂದು, ಅದು (ಮಾಯೆ) ಗುಣಗಳ ರೂಪದಲ್ಲಿ ಇವೆಯೆಂದು, ಗುಣಗಳನ್ನು ವಿಭಜಿಸಿ ನೋಡಿದರೆ, ಅನೇಕ ವಿಷಯಗಳ ರೂಪದಲ್ಲಿ ಇವೆಯೆಂದು, ಮೂರು ಗುಣವಿಷಯಗಳೇ ಅಂದರೆ 36 ಗುಣಗಳ ವಿಷಯಗಳೇ ವೇದಗಳಲ್ಲಿರುವವು ಎಂದು ಗೀತೆಯಲ್ಲಿ

ಮೇಲಿನ ಶ್ಲೋಕದಲ್ಲಿ ಹೇಳಲಾಗಿದೆ. ಗುಣ ವಿಷಯಗಳಿಂದ ತುಂಬಿಕೊಂಡ ವೇದಗಳು ಅಧರ್ಮಗಳೆಂದು, ಭಗವದ್ಗೀತೆಯಲ್ಲಿಯೆ ವಿಶ್ವರೂಪ ಸಂದರ್ಶನ ಯೋಗದಲ್ಲಿ 48, 53ನೇ ಶ್ಲೋಕಗಳಲ್ಲಿ ಭಗವಂತನು ಹೇಳಿದ್ದಾನೆ. ವೇದಗಳಿಂದಲೇ ದೇವರು ತಿಳಿಯುವುದಿಲ್ಲವೆಂದು ಸಹ ಅಲ್ಲಿಯೇ ಹೇಳಿದ್ದಾನೆ. ಈ ಐದು ಶ್ಲೋಕಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡವನು ಯಾರು ವೇದಗಳ ತಂಟೆಗೆ ಹೋಗುವುದಿಲ್ಲ. ಆದರೆ ವೇದಗಳು ಭಗವದ್ಗೀತೆಗಿಂತ ಮುಂದಿನವೆಂದು, ಭಗವದ್ಗೀತೆಗಿಂತ ಮುಖ್ಯವಾದವು ವೇದಗಳೆಂದು, ಮನುಷ್ಯರ ತಲೆಯಲ್ಲಿನ ಮಾಯೆ ಒಳಗೆ ತಿಳಿಸುವುದರಿಂದ, ಎಲ್ಲರೂ ಮಾಯೆಯಬಲೆಯಲ್ಲಿ ಸಿಲುಕಿಕೊಂಡು ವೇದಗಳನ್ನೇ ಮುಖ್ಯವೆಂದುಕೊಂಡಿದ್ದಾರೆ. ವೇದಗಳನ್ನು ಬರೆದ ವ್ಯಾಸನೆ ತನ್ನ ತಪ್ಪನ್ನು ತಾನು ತಿಳಿದುಕೊಂಡು ಮಾಯೆಯಬಲೆಯಲ್ಲಿ ಬೀಳದಂತೆ ತಪ್ಪಿಸಿಕೊಂಡು ಭಗವದ್ಗೀತೆಯನ್ನು ಬರೆದಾಗ, ಎಲ್ಲರೂ ಅದನ್ನು ಮರೆತುಹೋಗಿದ್ದಾರೆ. ವ್ಯಾಸನು ಮಹಾಜ್ಞಾನಿಯಾದ್ದರಿಂದ ವೇದರೂಪವಾದ, ಗುಣರೂಪವಾದ ಮಾಯೆಯನ್ನು ಜಯಿಸಿದ್ದಾನೆ.

ಮನುಷ್ಯರಲ್ಲಿ ಎಷ್ಟೋಜನ ಸ್ವಾಮಿಗಳು, ಪೀಠಾಧಿಪತಿಗಳು, ಬಾಬಾಗಳು, ಸನ್ಯಾಸಿಗಳು, ಆಧ್ಯಾತ್ಮಿಕ ಶಾಸ್ತ್ರಜ್ಞರೆನ್ನುವವರು ಇದ್ದಲ್ಲಿಯೂ ಮಾಯೆಯ ಪ್ರಭಾವದಿಂದ ಹೊರಬೀಳದೆ, ತಮ್ಮ ತಲೆಯಲ್ಲಿಯೇ ಇರುವ ಮಾಯೆಯನ್ನು ಜಯಿಸದೆ, ದೇವರು ಯಾರೊ ತಿಳಿಯದೆ, ಮಾಯೆಗೆ ಮರು ರೂಪದಲ್ಲಿರುವವು ವೇದಗಳೆಂದು ತಿಳಿಯದೆ, ನಿತ್ಯವು ವೇದಪಠಣೆ ಮಾಡುತ್ತಿದ್ದಾರೆ. ವೇದ ಮಂತ್ರಗಳನ್ನು ಜೋಡಿಸಿದ ಆರಾಧನೆಗಳನ್ನೇ ಮಾಡುತ್ತಿದ್ದಾರೆ. ಈ ಕಾಲದಲ್ಲಿ ಏನು ತಿಳಿಯದ ಮನುಷ್ಯರು ತಿಳಿದವರೆಂಬುವ ನಂಬಿಕೆಯಿಂದ ಇತರರ ಸಲಹೆ ಮೇರೆಗೆ ಕೆಲವು ವಿಧಗಳ ಕೆಲಸಗಳನ್ನು ಮಾಡುತ್ತಿದ್ದಾರೆ. ಉಳಿದ ಬದುಕು ಬಾಳಿನ ವಿಷಯವಲ್ಲದೆ ಭಕ್ತಿ ವಿಷಯದಲ್ಲಾಗಲಿ, ಜ್ಞಾನ ವಿಷಯದಲ್ಲಾ ಗಲಿ, ಆ ವಿಷಯಗಳು ಚೆನ್ನಾಗಿ ತಿಳಿದ ಗುರುಗಳನ್ನೊ, ಸ್ವಾಮಿಗಳನ್ನೊ, ಪುರೋಹಿತರನ್ನು ಆಶ್ರಯಿಸಿ, ಅವರು ಹೇಳಿದಂತೆ ನಡೆದುಕೊಳ್ಳುತ್ತಿದ್ದರು.

ತಿಳಿಯದವರು ತಿಳಿದವರನ್ನು ಅನುಸರಿಸುವುದು ಸರ್ವಸಾಧಾರಣವಾದ್ದರಿಂದ, ತಿಳಿದವರೆಲ್ಲರ ತಲೆಯಲ್ಲಿ ವೇದಗಳು, ವೇದಗಳ ಸಂಬಂಧಿತ ಕಾರ್ಯಗಳು ಮುಖ್ಯವಾದವೆಂಬ ಧ್ಯಾಸ ಇರುವುದರಿಂದ, ವೇದಮಂತ್ರಗಳಿಂದ ಕೂಡಿಕೊಂಡ ಯಜ್ಞಗಳನ್ನೋ, ಮಂತ್ರಗಳಿಂದ ಕೂಡಿಕೊಂಡ ಆರಾಧನೆಗಳನ್ನೋ ಮಾಡೆಂದು ಹೇಳುವುದರಿಂದ, ಹಾಗೆ ಹೇಳುವವರೇ ಕೇಳುವವರಿಗೆ ಗುರುಗಳಾಗಿ ತಯಾರಾಗಿ ಭಕ್ತಿ, ಜ್ಞಾನಮಾರ್ಗದಲ್ಲಿ ಸಲಹೆಗಳು ಕೊಡುವುದರಿಂದ, ಅಂತಹವರು ಹೇಳಿರುವುದೆ ಎಲ್ಲರಿಗೂ ತಿಳಿದಿರುತ್ತದೆ. ಈ ಪದ್ಧತಿ ಪ್ರಕಾರ ಪೂರ್ವದಿಂದ ತಲೆಯಲ್ಲಿ ಮಾಯೆಯಲ್ಲಿದ್ದು, ಮಾಯಾ ಪ್ರಭಾವದಲ್ಲಿ ಭಕ್ತಿ, ಜ್ಞಾನವನ್ನು ಇತರರಿಗೆ ಬೋಧಿಸುವುದರಿಂದ, ಒಬ್ಬ ಗುರುವನ್ನು ಕೆಲವು ಸಾವಿರಜನ, ಕೆಲವು ಲಕ್ಷಗಳಷ್ಟುಜನ ಅನುಸರಿಸಿ ಅಧರ್ಮಗಳಾದ ವೇದಗಳನ್ನು, ಯಜ್ಞಗಳನ್ನು, ದಾನಗಳನ್ನು, ತಪಸ್ಸುಗಳನ್ನು ಆಚರಿಸಿ ಒಳ್ಳೆಯ ಮಾರ್ಗದಲ್ಲಿ ಇದ್ದೇವೆಂದು ತೃಪ್ತಿಪಡುತ್ತಿದ್ದಾರೆ. ತಾವು ಆಚರಿಸುವವು ಸರಿಯಾದ ಮಾರ್ಗಗಳು ಅಲ್ಲವೆಂದು, ಆ ಮಾರ್ಗದಲ್ಲಿ ದೇವರು, ದೇವರ ಜ್ಞಾನ ತಿಳಿಯುವುದಿಲ್ಲವೆಂದು, ತಾವು ಆಚರಿಸುವ ಆಚರಣೆಗಳು ಪೂರ್ತಿ ಅಧರ್ಮಗಳೆಂದು ಅವರಿಗೆ ತಿಳಿಯದಂತೆ ಹೋಗಿದೆ.

ಒಬ್ಬ ವ್ಯಕ್ತಿ ಸುಮಾರು ಮೂವತ್ತು ವರ್ಷಗಳಿಂದ ಅವರ ಗುರು ಉಪದೇಶಿಸಿದಂತೆ ನಿತ್ಯವು ಪ್ರಾತಃಕಾಲದಲ್ಲಿಯೇ ವೇದಮಂತ್ರಗಳನ್ನು ಸ್ವಲ್ಪವಾದರು ಪಾರಾಯಣ ಮಾಡುತ್ತಿದ್ದನು. ಒಂದು ಸಂದರ್ಭದಲ್ಲಿ ಆ ವ್ಯಕ್ತಿ ನನ್ನೊಂದಿಗೆ ಬೇಟಿಯಾಗಿ ಮಾತನಾಡಿದಾಗ ತಾನು ಒಬ್ಬ ಗುರುವನ್ನು ಆಶ್ರಯಿಸಿ ಮಂತ್ರೋಪದೇಶವನ್ನು ಹೊಂದಿದಿದ್ದೇನೆಂದು, ತನ್ನ ಗುರುಗಳು ಹೇಳಿದಂತೆ ಧ್ಯಾನವನ್ನು ಮಾಡುವುದಲ್ಲದೆ, ಬಹಳ ವರ್ಷಗಳಿಂದ ಗುರುಗಳ ಆಜ್ಞೆಮೇರೆಗೆ ಪ್ರತಿ ದಿನವೂ ಬೆಳಗ್ಗೆ ಅರ್ಧಗಂಟೆ ಸಮಯ ವೇದಪಾರಾಯಣವನ್ನು ಮಾಡುತ್ತಿದ್ದೇನೆಂದು ಹೇಳಿದನು. ಆಗ ನಾನು ಹೀಗೆ ಕೇಳಿದೆನು. “ನೀನು ಮಂತ್ರೋಪದೇಶವನ್ನು ಹೊಂದಿ ಮಂತ್ರಧ್ಯಾನ ಮಾಡುತ್ತಿದ್ದೀಯಾ ಅಲ್ಲವೆ! ಅದು ಅಲ್ಲದೆ ಅಧಿಕವಾಗಿ

ವೇದಪಾರಾಯಣ ಏಕೆ ಮಾಡುತ್ತಿದ್ದೀಯಾ." ಎಂದು ಕೇಳಿದಾಗ ಅದಕ್ಕೆ "ನಾನು ಬ್ರಾಹ್ಮಣನು ಆದ್ದರಿಂದ ತಪ್ಪದೆ ವೇದಪಠನೆ ಮಾಡಬೇಕೆಂದು ನಮ್ಮ ಗುರುಗಳು ಹೇಳಿದ್ದಾರೆ" ಎಂದು ಹೇಳಿದನು. ಈ ವಿಧವಾಗಿ ಮಾಯೆ ಎಷ್ಟೋ ಗುರುಗಳನ್ನು ತನ್ನ ಪಕ್ಷದಲ್ಲಿ ಸೇರಿಸಿಕೊಳ್ಳುವುದರಿಂದ, ಒಬ್ಬ ಗುರುವು ಹೇಳುವುದನ್ನು ಅನುಸರಿಸಿ ಕೆಲವು ಲಕ್ಷಗಳಷ್ಟುಜನರನ್ನು ಮಾಯೆ ತನ್ನ ಪ್ರಭಾವದಲ್ಲಿ ಸಿಲುಕಿಸಿಕೊಳ್ಳುತ್ತಿದೆ. ಹಾಗೆ ಒಂದುಬಾರಿ ಮಾಯೆಯ ಬಲೆಯಲ್ಲಿ ಬಿದ್ದರೆ ಅವನು ಜೀವನಪರ್ಯಂತವು ಹೊರಬೀಳುವುದಕ್ಕೆ ಸಾಧ್ಯವಾಗುವುದಿಲ್ಲ. ಅಂತಹವನಿಗೆ ದೇವರು ಇಳಿದುಬಂದು ಹೇಳಿದರು ಕೇಳುವ ಪರಿಸ್ಥಿತಿಯಲ್ಲಿ ಇರುವುದಿಲ್ಲ. ಈ ವಿಧವಾಗಿ ಭೂಮಿಮೇಲೆ ಮಾಯಾ ಪ್ರಭಾವ ಬೆಳೆದುಹೋಗಿ, ಅಧರ್ಮಗಳೆ ಎಲ್ಲಾರ ದೃಷ್ಟಿಯಲ್ಲಿ ಧರ್ಮಗಳಾಗಿ ಇರುವುದರಿಂದ, ಅಸಲು ಧರ್ಮಗಳ ಉದ್ದೇಶ ಇಲ್ಲದಂತೆ ಹೋಗುತ್ತಿದೆ. ಕರ್ಮಯೋಗ, ಬ್ರಹ್ಮಯೋಗ ಅನ್ನುವಮಾತೇ ತಿಳಿಯದಂತೆ ಹೋಗಿದೆ. ಅಂತಹ ಸಮಯದಲ್ಲಿ ದೇವರು ಭಗವಂತನಾಗಿ ಅವತರಿಸಿ ಯೋಗಗಳೆನ್ನುವ ಧರ್ಮಗಳನ್ನು, ಅವುಗಳಿಗೆ ಅನುಬಂಧ ಕಾರ್ಯಗಳನ್ನೂ ಬೋಧಿಸುವನು. ಆದರೂ ಮಾಯೆಯ ಮಾತಿನ ಮುಂದೆ ದೇವರ ಮಾತು ಲೆಕ್ಕಿಸದಂತಾಗುತ್ತಿದೆ. ತಲೆಯಲ್ಲಿಯೇ ಬೋಧಿಸುವುದಕ್ಕಿಂತ ಹೊರಗಿನಿಂದ ಬೋಧಿಸುವ ಬೋಧನೆಗಳು ಕಿವಿಯಲ್ಲಿ ತೂರುವುದಿಲ್ಲ. ಆದ್ದರಿಂದ ದೇವರು ಬೋಧಿಸಿದ ಬೋಧನೆಗಳು ಯಾರಿಗೂ ಅರ್ಥವಾಗದಂತೆ ಹೋಗಿವೆ. ಒಂದು ವೇದಗಳ ಆಚರಣೆಯಲ್ಲಿಯೇ ಧರ್ಮಗಳು ಇವು, ಅಧರ್ಮಗಳು ಇವು ಎಂದು ಅರ್ಥಮಾಡಿಕೊಳ್ಳದೆಹೋದರೆ, ಉಳಿದ ಮೂರು ಧರ್ಮಗಳ ವಿಷಯಗಳಲ್ಲಿಯೂ ಇನ್ನು ಹೆಚ್ಚಿನ ಜನರು ತಪ್ಪಾಗಿ ತಿಳಿದುಕೊಂಡು ದೇವರಿಗೆ ದೂರವಾಗಿ ಹೋಗುತ್ತಿದ್ದಾರೆ.

ಪೂರ್ವದಲ್ಲಿ ದ್ವಾಪರಯುಗದಲ್ಲಿ ಪ್ರಜೆಗಳ ದೃಷ್ಟಿಯಲ್ಲಿ ದೊಡ್ಡವರಾಗಿರುವ ಮಹರ್ಷಿಗಳು ವೇದಗಳಿಗೂ, ಯಜ್ಞಗಳಿಗೂ ಅಭ್ಯಾಸವಾಗಿದ್ದರು. ಮಹರ್ಷಿಗಳು ಮಾಡುವ ಕೆಲಸಗಳು ಒಳ್ಳೆಯವೆಯೆಂದು, ಧರ್ಮಗಳೇ ಎಂದು

ಉಳಿದವರೆಲ್ಲರೂ ಅಂದುಕೊಳ್ಳುತ್ತಿದ್ದರು. ಪ್ರಸ್ತುತಕಾಲದಲ್ಲಿ ಮಹರ್ಷಿಗಳು ಇಲ್ಲದಂತೆಹೋಗಿದ್ದಾರೆ. ಅವರ ಸ್ಥಾನದಲ್ಲಿ ಬ್ರಾಹ್ಮಣರು ಬಂದಿದ್ದಾರೆ. ಬ್ರಾಹ್ಮಣರು ಸತ್‌ಬ್ರಾಹ್ಮಣರು ಕೆಲವರಿರುವಾಗ, ಉಳಿದವರು ದುಷ್‌ಬ್ರಾಹ್ಮಣರು ಎಂದು ಎರಡು ವಿಧಗಳಿರುವಂತೆ ಬಹಳಜನರಿಗೆ ತಿಳಿದಿಲ್ಲ. ಆದರೂ ಸದ್‌ಬ್ರಾಹ್ಮಣ ಎಂಬ ಪದವನ್ನು ಬಹಳಜನರು ಕೇಳಿಯೇ ಇರುತ್ತಾರೆ. ಪ್ರಪಂಚದಲ್ಲಿ ಸದ್ ಬ್ರಾಹ್ಮಣರು ಇದ್ದ ನಂತರ ದುಷ್‌ಬ್ರಾಹ್ಮಣರು ಇರುವುದು ಸಹಜವೇ ತಾನೆ! ಕೆಲವರು ತಿಳಿಯದ ಸ್ಥಿತಿಯಲ್ಲಿ ದುಷ್‌ಬ್ರಾಹ್ಮಣರಾಗಿ ಇದ್ದರೂ, ತಮ್ಮ ತಪ್ಪನ್ನು ತಿಳಿದುಕೊಂಡು ಸದ್‌ಬ್ರಾಹ್ಮಣರಾಗಿ ಬದಲಾದವರು ಸಹ ಬಹಳಜನ ಇದ್ದಾರೆ. ಕೆಲವರಾದರೆ ತಾವು ಅಧರ್ಮಗಳಲ್ಲಿ ಇದ್ದೇವೆಂದು ತಿಳಿದರು, ತಮ್ಮನ್ನು ತಾವು ಸಮರ್ಥಿಸಿಕೊಳ್ಳುತ್ತಾ ತಮ್ಮದೆ ನಿಜವಾದ ಧರ್ಮವೆಂದು ವಾದಿಸುತ್ತಿರುತ್ತಾರೆ. ಅಂತಹವರು ದೇವರ ಬೋಧನೆಗಳಿಗೆ, ದೇವರ ಧರ್ಮಗಳಿಗೆ ವಿರುದ್ಧವಾಗಿ ಮಾತನಾಡುವುದರಿಂದ ಅವರಿಗೆ ನಂತರ ಜನ್ಮಗಳಲ್ಲಿ ದೊಡ್ಡ ಶಿಕ್ಷೆಗಳಿರುತ್ತವೆ.

ಭಗವದ್ಗೀತೆಯಲ್ಲಿ ದೇವರು ಹೇಳಿದ ನಾಲ್ಕು ಅಧರ್ಮಗಳಲ್ಲಿ ವೇದಪಠನ, ಯಜ್ಞಗಳು ಅವಿನಾಭಾವ ಸಂಬಂಧವಾಗಿವೆ. ಪೂರ್ವದಲ್ಲಿ ಕೃತ, ತ್ರೇತಾ ಯುಗಗಳಲ್ಲಿ ಯಜ್ಞಗಳಿದ್ದರೂ ಅವುಗಳಿಗೆ ವೇದಮಂತ್ರಗಳಿರದೆ ದೇವತಾ ಮಂತ್ರಗಳಿರುತ್ತಿದ್ದವು. ಯಾವ ದೇವತೆಗೆ ಯಜ್ಞಮಾಡಬೇಕೋ ಆ ದೇವತಾ ಮಂತ್ರವನ್ನು ಆ ಯಜ್ಞದಲ್ಲಿ ಓದುತ್ತಿದ್ದರು. ದ್ವಾಪರಯುಗದಿಂದ ಆ ಪದ್ಧತಿಹೋಗಿ ಯಾವ ಯಜ್ಞಕ್ಕಾದರೂ ವೇದಮಂತ್ರಗಳನ್ನು ಜೋಡಿಸುತ್ತಿದ್ದಾರೆ. ಈಗಿನ ಕಾಲದಲ್ಲಿ ವೇದಗಳು ಯಜ್ಞಗಳು ಎಲ್ಲರ ದೃಷ್ಟಿಯಲ್ಲಿ ಸತ್‌ಕಾರ್ಯಗಳಾಗಿ ಕಾಣಿಸುತ್ತಿದ್ದರೂ, ದೇವರ ಜ್ಞಾನದ ಪ್ರಕಾರ ಅವು ಎರಡು ಅಧರ್ಮಗಳೇ ಎಂದು ತಿಳಿಯಬೇಕು. ವೇದಗಳನ್ನು, ಯಜ್ಞಗಳನ್ನು ಆಚರಿಸುವವರು ಸದ್ ಬ್ರಾಹ್ಮಣರಾಗಿ ಕಾಣಿ ಸುತ್ತಿದ್ದರು, ದೇವರ ಮಾರ್ಗದಲ್ಲಿ ಅವರು ಅಧರ್ಮವರರೆ ಎಂದು ತಿಳಿಯಬೇಕು. ಅವರು ಒಳ್ಳೆಯ ಬ್ರಹ್ಮಜ್ಞಾನವನ್ನು (ದೈವಜ್ಞಾನವನ್ನು) ತಿಳಿದು ಸದ್‌ಬ್ರಾಹ್ಮಣರಾಗಿ ಬದಲಾಗಬಹುದು. ತಾವಿರುವ ಸ್ಥಿತಿಯಿಂದ ಬ್ರಹ್ಮಜ್ಞಾನ ತಿಳಿದು, ಬ್ರಾಹ್ಮಣನು

ಎಂಬ ಮಾತನ್ನು ಸಾರ್ಥಕಮಾಡಿ ಸದ್‌ಬ್ರಾಹ್ಮಣರಾಗಿ ಬದಲಾದವರನ್ನು ಬಹಳಜನರನ್ನು ನೋಡಿದ್ದೇನೆ. ಹಾಗೆ ಬದಲಾಗಿ ಬ್ರಹ್ಮಜ್ಞಾನಿಗಳಾದವರಿಗೆ ಯಾರಾದರು ನಮಸ್ಕರಿಸಬಹುದು. ಆದರೆ ದುಷ್ ಬ್ರಾಹ್ಮಣರಾಗಿದ್ದು ಅಧರ್ಮ ಆಚರಣೆಗಳಾದ ವೇದಪಠನೆ, ಯಜ್ಞಗಳನ್ನು ಮಾಡುವವರಿಗೆ ನಮಸ್ಕರಿಸಿದರೆ ನಮಸ್ಕರಿಸಿದವನಿಗೂ ಸಹ ಸ್ವಲ್ಪ ಪಾಪಬರುತ್ತದೆ. ಆದ್ದರಿಂದ ಯಾರ ದರ್ಶನದಿಂದ, ಯಾರಿಗೆ ನಮಸ್ಕರಿಸುವುದರಿಂದ ಪಾಪ ನಶಿಸುತ್ತದೋ, ಅಂತಹ ಬ್ರಾಹ್ಮಣರಿಗೆ ನಮಸ್ಕರಿಸುವುದು ಒಳ್ಳೆಯದು.

ಬ್ರಾಹ್ಮಣರಲ್ಲಿ ಸದ್ ಬ್ರಾಹ್ಮಣರು, ದುಷ್ ಬ್ರಾಹ್ಮಣರು ಎಂದು ಎರಡು ವಿಧಗಳಿರುವಂತೆ, ಯಜ್ಞಗಳಲ್ಲಿಯೂ ಸಹ ಧರ್ಮದಿಂದ ಕೂಡಿದ ಯಜ್ಞಗಳು, ಅಧರ್ಮದಿಂದ ಕೂಡಿದ ಯಜ್ಞಗಳೆಂದು ಎರಡು ವಿಧಗಳು ಇವೆ. ಭಗವದ್ಗೀತೆ ಯಲ್ಲಿ ಯಜ್ಞಗಳಿಂದ ದೇವರು ತಿಳಿಯುವುದಿಲ್ಲವೆಂದು ಹೇಳಿದ್ದಾರೆ. ದೇವರು ಅಧರ್ಮಗಳಿಂದ ತಿಳಿಯುವುದಿಲ್ಲ, ಆದ್ದರಿಂದ ಯಜ್ಞಗಳನ್ನು ಅಧರ್ಮಗಳು ಅಂದಿದ್ದೇವೆ. ಅಧರ್ಮಗಳೆಂದು ಹೇಳಿದ ಯಜ್ಞಗಳು ದುಷ್ ಬ್ರಾಹ್ಮಣರು ಮಾಡುತ್ತಿರುವ ಬಾಹ್ಯಯಜ್ಞಗಳೆಂದು ತಿಳಿಯಬೇಕು. ಬಾಹ್ಯ ಯಜ್ಞಗಳನ್ನು ನಿತ್ಯಕೃತ್ಯಗಳಾಗಿ ಇಟ್ಟುಕೊಂಡ ಆರ್ಯಸಮಾಜ ಮೊದಲಾದವರು ಇದ್ದಾರೆ. ಎಷ್ಟು ದೊಡ್ಡವರಾದರು ಬಾಹ್ಯ ಯಜ್ಞಗಳನ್ನು ಆಚರಿಸಿದರೂ, ಧರ್ಮಾಧರ್ಮಗಳ ಪ್ರಕಾರ ನೋಡಿದರೆ ಅವು ಅಧರ್ಮಯುಕ್ತಗಳೇ ಆಗುತ್ತವೆ. ಆದರೆ ಭಗವದ್ಗೀತೆಯಲ್ಲಿ ಕರ್ಮಯೋಗದಲ್ಲಿ 10ನೇ ಶ್ಲೋಕದಿಂದ 16ನೇ ಶ್ಲೋಕ ದವರೆಗೂ 7 ಶ್ಲೋಕಗಳು ಮತ್ತು ಜ್ಞಾನಯೋಗದಲ್ಲಿ 24ನೇ ಶ್ಲೋಕದಿಂದ 32ನೇ ಶ್ಲೋಕದವರೆಗೂ 9 ಶ್ಲೋಕಗಳು, ವ್ಯಾಸನು ಬರೆದುಹೋದ ಭಗವದ್ಗೀತೆಯಲ್ಲಿ ಸೇರಿಸಲಾಗಿದೆ. ಕರ್ಮಯೋಗದಲ್ಲಿ 7 ಶ್ಲೋಕಗಳಲ್ಲಿ ಬಾಹ್ಯ ಯಜ್ಞಗಳನ್ನು ಕುರಿತು ಬರೆದ ಶ್ಲೋಕಗಳೆ, ಹಾಗೆಯೆ ಜ್ಞಾನಯೋಗದಲ್ಲಿ ಸೇರಿಸಿದ 9 ಶ್ಲೋಕಗಳು ಸಹ ಬಾಹ್ಯಯಜ್ಞಗಳನ್ನು ಕುರಿತು ಹೇಳಿರುವವೆ. ಕರ್ಮಯೋಗ ದಲ್ಲಿನ 9ನೇ ಶ್ಲೋಕದಲ್ಲಿ ಯಜ್ಞ ಎಂಬ ಹೆಸರು ಬರುತ್ತಲೇ ದುಷ್ಟಬುದ್ಧಿ

ಇರುವವರು ಅಧರ್ಮಯಜ್ಞಗಳನ್ನು ಸೇರಿಸಿ, ಅವುಗಳನ್ನು ಇಂದಿಗೂ ಯಾರು ಗುರುತಿಸಲಾರದೆ ಹೋಗಿದ್ದಾರೆ. ಹಾಗೆಯೇ ಜ್ಞಾನಯೋಗದಲ್ಲಿ 23ನೇ ಶ್ಲೋಕದಲ್ಲಿ ಯಜ್ಞ ಎಂಬ ಹೆಸರು ಕಾಣಿಸುತ್ತಲೇ 24, 25, 26, 27, 28, 29, 30, 31, 32 ರವರೆಗೂ ಒಟ್ಟು 9 ಶ್ಲೋಕಗಳನ್ನು ಸೇರಿಸಿದ್ದಾರೆ. ಕರ್ಮಯೋಗದಲ್ಲಿನ 7 ಶ್ಲೋಕಗಳು, ಜ್ಞಾನಯೋಗದಲ್ಲಿನ 9 ಶ್ಲೋಕಗಳು ಒಟ್ಟು 16 ಶ್ಲೋಕಗಳು ಬಾಹ್ಯಯಜ್ಞಗಳನ್ನು ಕುರಿತು ಬರೆದಿರುವವೆ. ಈ ಶ್ಲೋಕಗಳಿಂದ ವ್ಯಾಸನಿಗೆ ಎಂತಹ ಸಂಬಂಧವು ಇಲ್ಲ. ವ್ಯಾಸನು ಹೋದ ನಂತರ ಸ್ವಾರ್ಥಪರರು ಬಾಹ್ಯವಾಗಿ ಮಾಡುವ ಯಜ್ಞಗಳನ್ನು ಕುರಿತು ಕಲ್ಪಿತ ಶ್ಲೋಕಗಳನ್ನು ಗೀತೆಯಲ್ಲಿ ಸೇರಿಸುವುದರಿಂದ, ನಂತರ ಬಂದ ಜ್ಞಾನಿಗಳು ಯಾರೂ ಅವುಗಳನ್ನು ಕಂಡುಕೊಳ್ಳದಂತಿದ್ದಾರೆ. ಹಾಗೆ ಕಂಡುಹಿಡಿಯದೆ ಹೋಗುವುದಕ್ಕೆ ಕಾರಣ ಏನೆಂದರೆ! ಯಾರಿಗೂ ಧರ್ಮಾಧರ್ಮಗಳ ವಿವರವು ತಿಳಿಯದಿರುವುದೆ ಕಾರಣವೆಂದು ಹೇಳಬಹುದು. ಕೆಲವರು ಗುರುಗಳಾಗಿ ಚಲಾವಣೆಯಾಗುವವರು ಸ್ವಲ್ಪವೂ ಸಹ ವಿಚಕ್ಷಣ ದೃಷ್ಟಿ ಇಲ್ಲದವರಾಗಿ ತಮ್ಮನ್ನು ಆಶ್ರಯಿಸಿದ ಮನುಷ್ಯರೆಲ್ಲರನ್ನು ಕಣ್ಣಿಗೆ ಬಟ್ಟೆಕಟ್ಟಿ ಕುರುಡರನ್ನು ಮಾಡಿದಂತೆ ಮಾಡಿ, ನಾವು ಹೇಗೆ ನಡೆಸಿದರೆ ಹಾಗೆ ನಡೆಯಿರಿ, ನಿಮ್ಮನ್ನು ನಡೆಸುವ ಜವಾಬ್ದಾರಿ ನಮ್ಮದು ಎನ್ನುತ್ತಿದ್ದಾರೆ. ಆ ವಿಧವಾಗಿ ಅವರಿಗೂ ಸಹ ವಿಚಕ್ಷಣಾ ದೃಷ್ಟಿ ಇಲ್ಲದಂತೆ ಮಾಡಿ ಗಂಡಹೆಂಡತಿಯರನ್ನು ಒಂದು ಯಜ್ಞಕುಂಡದ ಹತ್ತಿರ ಒಂದು ಜೋಡಿಯಾಗಿ ಕೂರಿಸಿ, ಅವರ ಕೈಯಿಗೆ ಕೆಲವು ವಸ್ತುಗಳು ಕೊಟ್ಟು ಯಾವಾಗ ಹಾಕು ಎಂದರೆ ಆಗ ಅಗ್ನಿಕುಂಡದೊಳಗೆ ಹಾಕುವಂತೆ ಮಾಡುತ್ತಿದ್ದಾರೆ. ನೂರುಮಂದಿ ದಂಪತಿಗಳಿಗೆ ನೂರು ಕುಂಡಗಳನ್ನು ಮಾಡಿಸಿ, ಒಂದೊಂದು ಜೋಡಿಗೆ ಒಂದೊಂದು ಕುಂಡದಿಂದ ಕುರುಡನನ್ನು ನಡೆಸಿದಂತೆ ಮಂತ್ರಗಳನ್ನು ಓದುತ್ತಾ ಕುಂಡದೊಳಗೆ ಏನು ಹಾಕೆಂದರೆ ಅವು ಹಾಕುತ್ತಾ, ಯಾವಾಗ ಹಾಕು ಎಂದರೆ ಆಗ ಹಾಕುವಂತೆ ಒಂದು ಆಟದಂತೆ ಮಾಡಿಸುತ್ತಿದ್ದಾರೆ. ಏಕೆ ಯಜ್ಞ ಮಾಡುತ್ತಿದ್ದೇವೆ? ನಾವು ಮಾಡುವ ಕೆಲಸ ಧರ್ಮವಾದುದಾ? ಅಧರ್ಮವಾದುದಾ? ಇದರಿಂದ ಬರುವ ಫಲಿತವು ನಿಜವೇನಾ? ಎಂದು

ಸ್ವಲ್ಪವೂ ಸಹ ಆಲೋಚಿಸದವರು, ಮಾಡಿಸುವವರು ಹೇಗೆ ಆಡಿಸಿದರೆ ಹಾಗೆ ಆಡುತ್ತಿದ್ದಾರೆ. ಕೆಲವರು ಸ್ವಾರ್ಥಕ್ಕೋಸ್ಕರ ಎಲ್ಲರನ್ನೂ ಅಜ್ಞಾನದ ದಾರಿಯಲ್ಲಿ ಅಧರ್ಮ ಗಮ್ಯಕ್ಕೆ ನಡೆಸುತ್ತಿದ್ದಾರೆ.

ಒಂದುಮಾತಿನಲ್ಲಿ ಹೇಳಬೇಕೆಂದರೆ ಬಾಹ್ಯಯಜ್ಞಗಳೆಲ್ಲವೂ ಅಧರ್ಮ ಯುಕ್ತವಾದವೇ. ಅವುಗಳನ್ನು ಮಾಡುವವರೆಲ್ಲರೂ ಅಧರ್ಮಯುತರೇ. ಗೀತೆಯಲ್ಲಿ ಯಜ್ಞಗಳ ಪ್ರಸಕ್ತಿಯನ್ನು ಭಗವಂತನು ತೆಗೆದುಕೊಂಡುಬಂದಿದ್ದಾನೆ. ಆದರೆ ಭಗವಂತನು ಹೇಳಿದ ಯಜ್ಞಗಳು ನಡೆಯುವವಲ್ಲ. ಮಂತ್ರಗಳಿಂದ ಮಾಡುವವು ಅಲ್ಲ. ಆದರೂ ಹೇಳಿದ ಯಜ್ಞಗಳು ಶರೀರದೊಳಗೆ ನಡೆಯುವವೇ. ಶರೀರದಲ್ಲಿ ನಡೆಯುವ ಯಜ್ಞಗಳು ಧರ್ಮದಿಂದ ಕೂಡಿಕೊಂಡಿವೆ, ಸರ್ವ ಕರ್ಮಗಳನ್ನು ಸುಟ್ಟುಹಾಕುವವು. ಆದರೆ ಬಾಹ್ಯ ಯಜ್ಞಗಳು ಕರ್ಮಗಳನ್ನು ಸೃಷ್ಟಿಸಿರುವವಾಗಿ ಇವೆ. ಬಾಹ್ಯಯಜ್ಞಗಳು ಎಷ್ಟೋ ವಿಧಗಳ ಹೆಸರುಗಳಿಂದ ಇವೆ. ಧರ್ಮದಿಂದ ಕೂಡಿಕೊಂಡ ಶರೀರದೊಳಗೆ ಯಜ್ಞ ಕೇವಲ ಒಂದೇ ವೊಂದು ಇದೆ. ಅದರ ಹೆಸರು ಜ್ಞಾನಯಜ್ಞ. ಧರ್ಮಯುಕ್ತವಾದ ಈ ಯಜ್ಞವನ್ನು ಕುರಿತು ಭಗವದ್ಗೀತೆಯ ಜ್ಞಾನಯೋಗದಲ್ಲಿ 33ನೇ ಶ್ಲೋಕದಲ್ಲಿ ಈ ವಿಧವಾಗಿ ಇದೆ.

***ಶ್ಲೋ॥ ಶ್ರೇಯಾನ್ ದ್ರವ್ಯಮಯಾ ದ್ಯಜ್ಞಾತ್ ಜ್ಞಾನ ಯಜ್ಞಃ ಪರಂತಪ! ।***
***ಸರ್ವಂ ಕರ್ಮಾಖಿಲಂ ಪಾರ್ಥ! ಜ್ಞಾನೇ ಪರಿಸಮಾಪ್ಯತೇ ॥***

**ಭಾವಾರ್ಥ** :– ದ್ರವ್ಯಯಜ್ಞಕ್ಕಿಂತ ಜ್ಞಾನಯಜ್ಞವು ಶ್ರೇಷ್ಟವಾದುದು. ಏಕೆಂದರೆ ಜ್ಞಾನಯಜ್ಞದಲ್ಲಿ ಸರ್ವಕರ್ಮಗಳು ಪರಿಸಮಾಪ್ತವಾಗುತ್ತವೆ.

ಈ ಶ್ಲೋಕದಲ್ಲಿ ಸರ್ವಕರ್ಮಗಳು ನಾಶವಾಗಿಹೋಗುವ ಒಂದೇ ವೊಂದು ಯಜ್ಞವನ್ನು ಕುರಿತು ಹೇಳಿದ್ದಾನೆ. ಅದೇ ಜ್ಞಾನಯಜ್ಞ. ಸರ್ವಕರ್ಮಗಳು ಮನುಷ್ಯನಿಗೆ ಇಲ್ಲದಂತೆ ಹೋದಾಗ ಮನುಷ್ಯ ದೇವರಲ್ಲಿ ಐಕ್ಯವಾಗಿಹೋ ಗುತ್ತಾನೆ. ಮನುಷ್ಯ ದೇವರನ್ನು ಸೇರುವುದಕ್ಕೆ ಬೇಕಾಗಿರುವವು ಯಾವುವೊ

ಅವುಗಳನ್ನೇ ದೇವರು ಹೇಳಿದ್ದಾನೆ. ಸರ್ವಕರ್ಮಗಳು ನಾಶವಾಗುವುದು ಯೋಗ ವಿಧಾನದಲ್ಲಿಯೇ ಇದೆ. ಆದ್ದರಿಂದ ಜ್ಞಾನ ಯಜ್ಞವು ದೇವರು ಹೇಳಿದ ಮೂರು ಯೋಗಗಳಲ್ಲಿ ಒಂದು ಯೋಗವಾಗುತ್ತದೆಂದು ತಿಳಿಯಬೇಕು. ಕರ್ಮಗಳು ನಾಶವಾಗದಂತೆ ಪುನಃ ಕೆಲವು ಕರ್ಮಗಳನ್ನು ತಂದಿಡುವವು ಅಧರ್ಮಗಳೆಂದು, ಅವುಗಳಿಂದ ಮನುಷ್ಯ ದೇವರನ್ನು ಸೇರುವುದಿಲ್ಲವೆಂದು ಹೇಳಬಹುದು. ಬಾಹ್ಯಯಜ್ಞಗಳು ಕರ್ಮಗಳನ್ನು ತಂದಿಡುವವು, ಅಧರ್ಮಗಳಿಂದ ಕೂಡಿಕೊಂಡಿರುವವಾಗುತ್ತವೆ. ತ್ರೇತಾಯುಗದಲ್ಲಿ ಬ್ರಹ್ಮಜ್ಞಾನಿಯೆಂದು, ತ್ರಿಕಾಲ ಜ್ಞಾನಿಯೆಂದು ಹೆಸರುವಾಸಿಯಾದ ಒಬ್ಬ ರಾಜ ತನ್ನ ರಾಜ್ಯದಲ್ಲಿ ಎಲ್ಲಿ ಯಾರೂ ಯಜ್ಞಗಳನ್ನು ಮಾಡಬಾರದೆಂದು ಶಾಸಿಸಿದ್ದಾನೆ. ಬಾಹ್ಯಯಜ್ಞಗಳನ್ನು ಅಧರ್ಮಗಳೆಂದು ತಿಳಿದ ಆ ರಾಜ್ಯದಲ್ಲಿರುವವರು ಪಕ್ಕರಾಜ್ಯದಲ್ಲಿ ಯಜ್ಞಗಳನ್ನು ಮಾಡುವವರೊಂದಿಗೆ ಘರ್ಷಣೆ ಮಾಡಿ, ಅವರ ಯಜ್ಞಗಳನ್ನು ಭಂಗ ಮಾಡುತ್ತಿದ್ದರು. ಆ ಚರಿತ್ರೆ ತಿಳಿದ ನಾವು ಯಜ್ಞಗಳನ್ನು ಮಾಡಿದವರನ್ನು ಒಳ್ಳೆಯವರಾಗಿ ಧರ್ಮವರರಾಗಿ ಲೆಕ್ಕಹಾಕಿದ್ದೇವೆ. ಬ್ರಹ್ಮಜ್ಞಾನ ಹೊಂದಿ ಯಜ್ಞಗಳನ್ನು ಮಾಡದಂತೆ ಆತಂಕಪಡಿಸಿದವರನ್ನು ಕೆಟ್ಟವರಾಗಿ ಅಧರ್ಮ ವರರಾಗಿ ಲೆಕ್ಕಹಾಕಿದ್ದೇವೆ. ಈಗ ಜ್ಞಾನ ತಿಳಿದ ನಂತರ ಯಾರನ್ನಾದರೆ ಧರ್ಮವರ ರೆಂದುಕೊಂಡಿದ್ದೇವೊ ಅವರನ್ನು ಅಧರ್ಮವರರೆಂದು, ಹಾಗೆ ಯಾರಾದರೆ ಅಧರ್ಮವರರೆಂದುಕೊಂಡಿದ್ದೇವೊ ಅವರನ್ನೇ ಧರ್ಮವರರೆಂದುಕೊಳ್ಳುವುದು ನಡೆದಿದೆ. ಜ್ಞಾನ ತಿಳಿಯದವರೆಲ್ಲರೂ ಧರ್ಮವನ್ನು ಅಧರ್ಮವಾಗಿ, ಅಧರ್ಮ ವನ್ನು ಧರ್ಮವಾಗಿ ಅಂದುಕೊಂಡಿದ್ದಾರೆ.

ಭಗವದ್ಗೀತೆಯಲ್ಲಿ ಭಗವಂತನು ಹೇಳಿದ ನಾಲ್ಕು ಅಧರ್ಮಗಳಲ್ಲಿ ಒಂದಕ್ಕೊಂದು ಅವಿನಾಭಾವಸಂಬಂಧ ಇರುವ ಯಜ್ಞಗಳನ್ನು, ವೇದಗಳನ್ನು ಎರಡನ್ನು ಕುರಿತು ಸ್ವಲ್ಪಮಟ್ಟಿಗೆ ತಿಳಿದುಕೊಂಡಿದ್ದೇವೆ. ಉಳಿದ ಎರಡು ಅಧರ್ಮಗಳಲ್ಲಿ ಒಂದನ್ನು ಹೆಚ್ಚಿನಜನರು ಆಚರಿಸುತ್ತಿದ್ದಾರೆ. ಅದೇ ತಪಸ್ಸು ಅಥವಾ ಧ್ಯಾನ. ಧ್ಯಾನ ಮಾಡುವುದು ಸಹ ಅಧರ್ಮವೇನಾ ಎಂದು ಕೆಲವರು

ಮೂತಿ ತಿರುವಿಕೊಂಡು ಮಾತನಾಡಬಹುದು. ನಿಮ್ಮ ಲೆಕ್ಕದಲ್ಲಿ ಯಾರು ಒಳ್ಳೆಯವರು ಎಂದು ನನ್ನನ್ನು ಎದುರು ಪ್ರಶ್ನೆಹಾಕಿ ಕೇಳಬಹುದು. ಎಷ್ಟೋ ಕಾಲದಿಂದ ಶ್ರಮಪಟ್ಟು ಧ್ಯಾನ ಮಾಡಿದವರೆಲ್ಲರೂ ಒಂದಾಗಿ ನಾವು ಮಾಡಿರುವುದೆಲ್ಲವೂ ವೃಥಾ ಶ್ರಮವೇನಾ? ಎಂದು ಕೇಳಬಹುದು. ನಮ್ಮದು ಒಳ್ಳೆಯ ಮಾರ್ಗವೆಂದುಕೊಂಡು ಯಾರು ಎಷ್ಟು ಶ್ರದ್ಧೆಯಿಂದ ಧ್ಯಾನ ಮಾಡಿದರೂ, ಕುಂಬಾರರ ಮದುಮಗಳು ದಿನ್ನೆ ಮೇಲಕ್ಕೆ ಬಂದರೆ ತಿಳಿಯುತ್ತದೆಂಬುವಂತೆ, ದೇವರು ಹೇಳಿದ ಧರ್ಮಾಧರ್ಮಗಳ ಪ್ರಕಾರ ಧ್ಯಾನ ಅಧರ್ಮವೆಂದು ತಿಳಿದುಹೋಗಿದೆ. ಪೂರ್ವದಿಂದ ಎಷ್ಟೋಜನ ದೊಡ್ಡವರೆಲ್ಲರೂ ಆಚರಿಸುತ್ತಿರುವುದು, ಈದಿನ ಸಹ ಎಲ್ಲಿ ದೈವಜ್ಞಾನವೆಂಬ ಮಾತು ಕೇಳಿಸಿದರೂ ಅಲ್ಲಿ ಎಲ್ಲರೂ ಮಾಡುವುದು ಧ್ಯಾನವೆ. ಧ್ಯಾನ ಇಂದು ಮನುಷ್ಯರ ಆಚರಣೆಯಲ್ಲಿ ಎಷ್ಟೊ ವಿಧಗಳಾಗಿದೆ. ಧ್ಯಾಸ ಹೊಂದಿರುವುದು ಧ್ಯಾನವೆಂದು, ತಪನಹೊಂದಿರು ವುದು ತಪಸ್ಸು ಎಂದು ದೊಡ್ಡವರು ಬಿಡಿಸಿ ವಿವರವಾಗಿ ಹೇಳಿದರೂ, ಧ್ಯಾಸ ತಪನೆ ಎರಡೂ ಒಂದೇ, ಆದ್ದರಿಂದ ಧ್ಯಾನ ಎಂದರೂ, ತಪಸ್ಸೆಂದರೂ ಎರಡೂ ಒಂದಾಗಿ ಲೆಕ್ಕಿಸಿಕೊಳ್ಳಬೇಕು. ಪೂರ್ವದಲ್ಲಿ ಮಹರ್ಷಿಗಳು ಮಾಡುವುದು ತಪಸ್ಸೆಂದು, ಇಂದು ಮನುಷ್ಯರು ಮಾಡುವುದು ಧ್ಯಾನವೆಂದು ಅಂದರೂ ಎರಡು ಕಾರ್ಯಗಳು ಒಂದೇ ಎಂದು, ಎರಡು ಅಧರ್ಮಗಳೆಂದು ಗೀತಾ ಚಾರ್ಯನು ಹೇಳಿರುವುದರ ಪ್ರಕಾರ ಅರ್ಥವಾಗುತ್ತಿದೆ. ಇಂದು ನಿತ್ಯ ಧ್ಯಾನ ಮಾಡುವವರು ಕೆಲವರಿರುವಾಗ, ಧ್ಯಾನಮಂದಿರಗಳನ್ನು ಕಟ್ಟಿಸಿ ಸಾಮೂಹಿಕವಾಗಿ ಧ್ಯಾನ ಮಾಡಿಸುವವರು ಕೆಲವರಿದ್ದಾರೆ.

ಈಗಿನ ನವೀನ ಕಾಲದಲ್ಲಿ ಕೆಲವರು ಗುರುಗಳು ಧ್ಯಾನವನ್ನು (ತಪಸ್ಸನ್ನು) ಕ್ಲಾಸುಗಳು, ಕೋರ್ಸುಗಳೆಂದು ಹೇಳಿ ಮಾಡಿಸಿ, ಆತನಿಗೆ ಒಂದು ಯೋಗ್ಯತ ಪ್ರಮಾಣ ಪತ್ರವನ್ನು ಸಹ ಕೊಡುತ್ತಿದ್ದಾರೆ. ಕೆಲವರು ಗುರುಗಳು ತಮ್ಮ ಧ್ಯಾನದಲ್ಲಿ ಹೊಸತನವನ್ನು ತೋರಿಸುತ್ತಾ ಎಲ್ಲರೂ ಮಂತ್ರ, ಜಪದ ಮೇಲೆ ಧ್ಯಾಸವನ್ನು ಇಟ್ಟುಕೊಂಡರೆ, ಮಂತ್ರದ ಮೇಲೆ ಅಥವಾ ಶರೀರ ಅವಯವಗಳ ಮೇಲೆ

ಧ್ಯಾಸವಿಡಿಸುತ್ತಾ ಹೊಸ ಹೊಸದಾಗಿ ಬೋಧಿಸುತ್ತಿದ್ದಾರೆ. ಕೆಲವರು ಧ್ಯಾನದಲ್ಲಿ ತಮ್ಮ ಧ್ಯಾಸವನ್ನು ಮೂಗಿನ ಮೇಲೆ ಇಟ್ಟುಕೊಳ್ಳಿರೆಂದು ಹೇಳಿದರೆ, ಕೆಲವರು ಶ್ವಾಸದಮೇಲೆ ಧ್ಯಾಸ ಇಟ್ಟುಕೊಳ್ಳಿರೆಂದು ಹೇಳುತ್ತಿದ್ದಾರೆ. ಮತ್ತೆಕೆಲವರು ನಾಸಿಕಾಗ್ರದ ಮೇಲೆ ಧ್ಯಾಸ ಇಟ್ಟುಕೊಳ್ಳಿರೆಂದು, ಕೆಲವರು ಮೂಗಿನ ಕೊನೆಭಾಗದಲ್ಲಿ ಧ್ಯಾಸವಿಟ್ಟುಕೊಳ್ಳಿರೆಂದು, ಕೆಲವರು ತಲೆಮೇಲೆಯೆಂದು, ಕೆಲವರು ತಲೆಮುಂದೆ ಹಣೆಯ ಭಾಗದಲ್ಲಿ ಎಂದು ವಿವಿಧ ಧ್ಯಾಸಗಳನ್ನು ಕಲಿಸುತ್ತಿದ್ದಾರೆ. ಕೆಲವು ಗುರುಗಳು ಬೇರೆ ಬೇರೆ ಮಂತ್ರಗಳನ್ನು ಉಪದೇಶ ಮಾಡಿ ಅವುಗಳನ್ನು ಧ್ಯಾನ ಮಾಡಿಕೊಳ್ಳಿರೆಂದು ಹೇಳುತ್ತಿದ್ದಾರೆ. ಕೆಲವರಾದರೆ ಮಾಡುವುದು ಧ್ಯಾನವೇ ಆದರೂ ಸ್ಪೆಷಲ್ ಮೆಡಿಟೇಷನ್ ಎಂದು ಆಂಗ್ಲಭಾಷೆಯಲ್ಲಿ ಹೇಳುತ್ತಿದ್ದಾರೆ. ಹೀಗೆ ನಾನೂ ಸಹ ಆಧ್ಯಾತ್ಮಿಕದಲ್ಲಿ ಇದ್ದೇನೆಂಬ ಗುರುತಿಗೋಸ್ಕರ ಎಲ್ಲರೂ ಧ್ಯಾನವನ್ನು ಮಾಡುತ್ತಿದ್ದಾರೆ. ಕೆಲವರು ನೀವು ಸಾಧನೆ ಏನು ಮಾಡುತ್ತಿದ್ದೀರಾ ಎಂದು ನನ್ನನ್ನು ಕೇಳಿದಾಗ, ನಾವು ಯಾವ ಸಾಧನೆ ಮಾಡಲಿಲ್ಲವೆಂದು ಹೇಳಿದ್ದೇವೆ. ಆಗ ಅವರು "ಅಯ್ಯೋ ನೀವು ಎಷ್ಟು ಹಿಂದೆ ಉಳಿದಿದ್ದೀರಾ" ಎಂದು ನಮ್ಮನ್ನು ಜಾಲಿಯಿಂದ ನೋಡಿದವರು ಇದ್ದಾರೆ.

ಒಂದು ದಿನ ತಿರುಪತಿಯಲ್ಲಿ ಒಬ್ಬ ವ್ಯಕ್ತಿ ಬೇಟಿಯಾದಾಗ, ಆತನು ಗುರುವಿನ ಮೂಲಕ ತಿಳಿದುಕೊಂಡ ಮಂತ್ರವನ್ನು ಏಕಾಗ್ರತೆಯಿಂದ ಧ್ಯಾನಿಸುತ್ತಾ ಕೆಲವು ವರ್ಷಗಳಿಂದ ಸಾಧನೆ ಮಾಡುತ್ತಿದ್ದೇನೆಂದು, ಈಗ ತನ್ನ ಮನಸ್ಸು ಒಂದೇ ಧ್ಯಾಸದಲ್ಲಿ ನಿಂತುಹೋಗುತ್ತದೆಂದು ಹೇಳಿ, ನಾನು ನನ್ನ ಸಾಧನೆಯನ್ನು ಪೂರ್ತಿಯಾಗಿ ಸಾಧಿಸಿದಂತೆ ಅಲ್ಲವೆ! ನನಗೆ ಮೋಕ್ಷ ಬರುತ್ತದೆ ಅಲ್ಲವೆ! ಎಂದು ಕೇಳಿದನು. ಆಗ ನಾನು "ಈಮಾತನ್ನು ನಿಮ್ಮ ಗುರುಗಳನ್ನೇ ಕೇಳಿರಿ" ಎಂದು ಹೇಳಿದಾಗ ಆತನು "ನಮ್ಮ ಗುರುಗಳು ಈ ಮಧ್ಯಕಾಲದಲ್ಲೆ ಹಾವು ಕಚ್ಚಿ ಸತ್ತುಹೋಗಿದ್ದಾನೆ." ಎಂದು ಹೇಳಿದನು. ಆಗ ನಾನು ಆತನ ಹತ್ತಿರ ಹೀಗೆ ಹೇಳಿದೆನು. ನೀನು ಒಂದು ಮಂತ್ರವನ್ನು ಹಿಡಿದುಕೊಂಡು ಅದನ್ನು ಮನಸ್ಸಿನಲ್ಲಿ ಎಷ್ಟುಬಾರಿ ಜಪಿಸುತ್ತಾ ಕುಳಿತುಕೊಂಡಿದ್ದೀಯಾ. ಸ್ವಲ್ಪ ಕಾಲಕ್ಕೆ

ನಿನ್ನ ಮನಸ್ಸು ಪಕ್ಕ ಧ್ಯಾಸಗಳ ಮೇಲಕ್ಕೆ ಹೋಗದಂತೆ ಮಂತ್ರದಮೇಲೆ ನಿಂತಿದೆ. ಅದರಿಂದ ನೀನು ತೃಪ್ತಿಹೊಂದಿ, ನಾನು ಮನಸ್ಸನ್ನು ಜಯಿಸಿದ್ದೇನೆ ಮೋಕ್ಷ ಬರುತ್ತದೆ ಎಂದುಕೊಳ್ಳುತ್ತಿದ್ದೀಯಾ. ಆದರೆ ಸತ್ಯ ತಿಳಿದುಕೊಂಡರೆ ಉಗ್ರವಾದ ತಪಸ್ಸುಗಳಿಂದಲೂ ಸಹ ನಾನು ತಿಳಿಯುವುದಿಲ್ಲ, ತಪಸ್ಸುಗಳಿಂದ ಯಾರಿಗೂ ಮುಕ್ತಿ ಲಭಿಸುವುದಿಲ್ಲವೆಂದು ದೇವರು ಹೇಳಿದ್ದಾನೆ. ಕೆಲವು ವರ್ಷಗಳು ಮೇಲಕ್ಕೆ ಏಳದಂತೆ ಒಂದೇ ಧ್ಯಾಸದಲ್ಲಿ ಇರುವವನನ್ನು ಉಗ್ರವಾದ ತಪಸ್ಸು ಮಾಡಿದವನೆಂದು ಹೇಳುತ್ತಾರೆ. ಆತನು ಅಷ್ಟು ವರ್ಷಗಳು ಯಾವುದೋ ಒಂದನ್ನು ಹಿಡಿದುಕೊಂಡು ಜಪಿಸುತ್ತಿದ್ದಾನೆ (ತಪಿಸುತ್ತಿದ್ದಾನೆ) ಆದರೆ ದೇವರನ್ನು ಕುರಿತು ಪ್ರಯತ್ನಿಸಲಿಲ್ಲ. ಆದ್ದರಿಂದ ಯಾವ ತಪಸ್ಸುಗಳಾಗಲಿ ಮೋಕ್ಷ ಕೊಡುವುದಿಲ್ಲ. ಅವುಗಳಿಂದ ದೇವರು ತಿಳಿಯುವುದಿಲ್ಲ. ಕೆಲವು ವರ್ಷಗಳು ಮೇಲೆ ಏಳದಂತೆ ಕುಳಿತುಕೊಂಡು ತಪಿಸುವವರಿಗೆ ಮೋಕ್ಷ ಇಲ್ಲದಿರುವಾಗ ಗಂಟೆಯೋ, ಅರ್ಧಗಂಟೆಯೋ ಕುಳಿತುಕೊಂಡು ಧ್ಯಾನ ಮಾಡುವವರಿಗೆ ದೇವರು ತಿಳಿಯುವುದಿಲ್ಲ, ಮೋಕ್ಷ ಬರುವುದಿಲ್ಲ.

ಕೆಲವರು ಹಿಮಾಲಯದೊಳಗೆ ಹೋಗಿ ಧ್ಯಾನ ಮಾಡುವವರು ಇದ್ದಾರೆ. ಕೆಲವರು ಭೂಮಿಯಲ್ಲಿ ಕುಣಿ ತೆಗೆದು ಅದರಲ್ಲಿ ಕುಳಿತುಕೊಂಡು ಜಪಿಸುವವರು ಇದ್ದಾರೆ. ಕೆಲವರು ಕತ್ತಿನವರೆಗೂ ನೀರಿನಲ್ಲಿ ಇಳಿದು ಧ್ಯಾನ ಮಾಡುವವರು ಇದ್ದಾರೆ. ಕೆಲವರು ಸುತ್ತಲು ಬೆಂಕಿಯನ್ನು ಹಚ್ಚಿ ಬೆಂಕಿಯ ಮಧ್ಯದಲ್ಲಿ ಕುಳಿತುಕೊಂಡು ಜಪಿಸುವವರು ಇದ್ದಾರೆ. ಕೆಲವರು ಬೆಟ್ಟದ ಶಿಖರಗಳ ಮೇಲೆ ಕುಳಿತುಕೊಂಡು ತಪಿಸುವವರೂ ಇದ್ದಾರೆ. ಈ ವಿಧವಾಗಿ ಎಷ್ಟೋಜನ ಎಷ್ಟೋ ವಿಧಗಳು ಸಾಧನೆಗಳು ಮಾಡುವವರಿದ್ದಾರೆ. ಜಪಿಸಿದರೂ, ತಪಿಸಿದರೂ, ಧ್ಯಾನಿಸಿದರೂ ಅವೆಲ್ಲವೂ ಮನಸ್ಸಿನಿಂದ ಮಾಡಬೇಕಾಗಿದ್ದೆ. ಆ ಕೆಲಸಗಳಲ್ಲಿಯೂ ಸಹ ಮನಸ್ಸು ಯಾವುದೊ ಒಂದು ಕೆಲಸ ಮಾಡುತ್ತದೆ. ಆದ್ದರಿಂದ ಅವೆಲ್ಲವೂ ಧರ್ಮಬದ್ಧವಾದವು ಅಲ್ಲ. ಗಾಳಿಯಿಲ್ಲದ ಕಡೆ ದೀಪವು ಬೆಳಗಿದಂತೆ ಯಾರ ಮನಸ್ಸು ನಿಂತು ಹೋಗುತ್ತದೋ ಅವನು ಬ್ರಹ್ಮಯೋಗವನ್ನು ಸಾಧಿಸಿದಂತಾ

ಗುತ್ತದೆಂದು ಭಗವದ್ಗೀತೆಯಲ್ಲಿ ಹೇಳಿದ್ದಾನೆ. ಮನಸ್ಸು ನಿಂತರೆ ಯೋಗವಾಗುತ್ತದೆ. ಮನಸ್ಸಿಗೆ ಒಂದು ಕೆಲಸವಿದ್ದರೆ ಅದು ಧ್ಯಾನವಾಗುತ್ತದೆ. ಧ್ಯಾನದಿಂದ ದೇವರು ತಿಳಿಯುವುದಿಲ್ಲ. ಆದ್ದರಿಂದ ಗೀತೆಯಲ್ಲಿ ತಪಸ್ಸನ್ನು ಅಧರ್ಮದೊಳಗೆ ಸೇರಿಸಿ ಹೇಳಲಾಗಿದೆ. ಅಧರ್ಮವಾದ ಕಾರ್ಯಗಳಿಂದ ಪುನಃ ಜನ್ಮಗಳು ಉಂಟಾಗುತ್ತವೆ. ಆದರೆ ಜನ್ಮರಹಿತವು ಉಂಟಾಗುವುದಿಲ್ಲ. ಎಷ್ಟು ದೊಡ್ಡವರಾದರೂ, ಗುರುಗಳೆಂದು ಹೆಸರು ಇಟ್ಟುಕೊಂಡವರಾದರೂ, ಒಂದು ವಿಷಯವನ್ನು ಧ್ಯಾಸದಲ್ಲಿಟ್ಟುಕೊಂಡು ಧ್ಯಾನಿಸುವುದರಿಂದಾಗಲಿ, ಒಂದು ಮಂತ್ರವನ್ನು ಜಪಿಸುವುದರಿಂದಾಗಲಿ, ಒಂದನ್ನು ಕುರಿತು ತಪಿಸುವುದರಿಂದಾಗಲಿ, ಮನುಷ್ಯನಿಗೆ ಶಕ್ತಿಗಳು ಉಂಟಾಗುತ್ತವೆ, ಕರ್ಮಗಳು ಹೆಚ್ಚಾಗುತ್ತವೆ. ಕರ್ಮಗಳು ಕರಗಿಹೋಗುವ ವಿಧಾನ ಜಪ, ತಪ, ಧ್ಯಾಸಗಳಲ್ಲಿ ಇಲ್ಲ. ಆದ್ದರಿಂದ ಈಗಿನಿಂದಾದರೂ ಕಾಲವನ್ನು ವೃಥಾಮಾಡಿ ಕೊಳ್ಳದಂತೆ, ಅಧರ್ಮಗಳೆಂದು ದೇವರು ಹೇಳಿರುವವುಗಳನ್ನು ಬಿಟ್ಟು, ಧರ್ಮಗಳಾದ ಯೋಗಗಳನ್ನು ಆಚರಿಸಬೇಕೆಂದು ತಿಳಿಸುತ್ತಿದ್ದೇವೆ, ಅಧರ್ಮ ಗಳಾದ ವೇದಗಳು, ಯಜ್ಞಗಳು, ತಪಸ್ಸುಗಳು, ದಾನಗಳು ಬಹಳ ಕಷ್ಟದಿಂದ ಕೂಡಿಕೊಂಡಿರುವವಾಗಿವೆ. ಧರ್ಮಗಳಾದ ಯೋಗಗಳು ಮೂರು, ಅವುಗಳಿಗೆ ಸಂಬಂಧಿಸಿದ ಜ್ಞಾನವನ್ನು ತಿಳಿದರೆ ಬಹಳ ಸುಲಭವಾಗಿ ಕಷ್ಟ ಇಲ್ಲದವುಗಳಾಗಿವೆ ಯೆಂದು ಹೇಳಬಹುದು. ತ್ರೇತಾಯುಗದಲ್ಲಿ ಜನಕಮಹಾರಾಜ ವೇದಗಳ, ಯಜ್ಞಗಳ, ತಪಸ್ಸುಗಳ, ದಾನಗಳ ಸಹವಾಸಕ್ಕೆ ಹೋಗದಂತೆ ಒಂದೇ ಒಂದು ಕರ್ಮಯೋಗದ ಮೂಲಕ ಮೋಕ್ಷವನ್ನು ಹೊಂದಿದ್ದಾನೆ. ದೇವರೊಳಗೆ ಐಕ್ಯವಾಗಿಹೋಗಿದ್ದಾನೆಂದು ಗೀತೆಯಲ್ಲಿ ಭಗವಂತನೇ ಹೇಳಿದ್ದಾನೆ.

ಧರ್ಮಗಳೆಂದರೆ ಏನೋಯೆಂದು, ಇಷ್ಟುಜನ ಸ್ವಾಮೀಜಿಗಳಿಗೂ, ಗುರುಗಳಿಗೂ ತಿಳಿಯದಂತೆ ಹೋದಾಗ ನಮಗೆ ತಿಳಿಯುತ್ತದೆಯಾ ಎಂದು ಅಂದುಕೊಳ್ಳಬೇಕಾದ ಕೆಲಸವಿಲ್ಲ. ಧರ್ಮಗಳು ಅಧರ್ಮಗಳಿಗಿಂತ ಸುಲಭ ವಾದವು. ಅಧರ್ಮಗಳ ಸಂಖ್ಯೆಗಿಂತ ಕಡಿಮೆ ಸಂಖ್ಯೆಯಲ್ಲಿವೆ. ತಿಳಿದುಕೊಳ್ಳ

ಬೇಕೆಂಬ ಶ್ರದ್ಧೆಯಿದ್ದರೆ ಪಾಮರರಿಗಾದರೂ, ಓದುಬಾರದವನಿಗಾದರೂ ಸುಲಭವಾಗಿ ಅರ್ಥವಾಗುತ್ತದೆ. ಯಾವಾಗಾದರು ಧರ್ಮಗಳಿಗೆ ಹಾನಿ ಏರ್ಪಟ್ಟು ಅವು ಯಾರಿಗೂ ತಿಳಿಯದಂತೆ ಹೋದಾಗ, ಅಧರ್ಮಗಳು ಪ್ರಚಾರವಾಗಿಹೋಗಿ ಅವುಗಳನ್ನೆ ಎಲ್ಲರೂ ಆಚರಿಸಿದಾಗ, ನಾನು ಅವತರಿಸಿ ಬಂದು ಪುನಃ ಧರ್ಮಗಳನ್ನು ತಿಳಿಸುತ್ತೇನೆಂದು ಭಗವದ್ಗೀತೆಯಲ್ಲಿನ ಜ್ಞಾನಯೋಗದಲ್ಲಿ ಮೊದಲೆ ಹೇಳಲಾಗಿದೆ. ಆ ಮಾತಿನ ಪ್ರಕಾರ ದ್ವಾಪರಯುಗದ ಕೊನೆಯಲ್ಲಿ ವ್ಯಾಸನು, ಭೀಷ್ಮನು, ದ್ರೋಣನು ಮೊದಲಾದವರು ಅವರೇ ಅಲ್ಲದೆ, ಎಷ್ಟೋಜನ ಮಹರ್ಷಿಗಳಿರುವ ಸಮಯದಲ್ಲಿ, ಮನುಷ್ಯರಿಗೆ ಧರ್ಮಗಳು ತಿಳಿಯದಂತೆಹೋಗಿ ಅಧರ್ಮ ಆಚರಣೆಗಳು ಹೆಚ್ಚಾಗಿ ಇರುವುದರಿಂದ, ದೇವರು ಭಗವಂತನಾಗಿ ಹುಟ್ಟಿ ಭಗವದ್ಗೀತೆ ರೂಪದಲ್ಲಿ ತನ್ನ ಧರ್ಮಗಳನ್ನು ತಿಳಿಸಿದ್ದಾನೆ. ದೇವರು ವಿಶ್ವದಲ್ಲಿ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆ. ಕ್ಷರ ಪುರುಷನಾಗಿ, ಅಕ್ಷರ ಪುರುಷನಾಗಿ, ಪುರುಷೋತ್ತಮನಾಗಿ ದೇವರು ಇರುವುದರಿಂದ ಆತನು ಭೂಮಿಮೇಲೆ ಮೂರುಬಾರಿ ಜನ್ಮಿಸಿದರೆ ಒಂದುಬಾರಿ ಪೂರ್ತಿಯಾಗಿ ಅವತರಿಸಿದಂತಾಗುತ್ತದೆ. ಈ ಪದ್ಧತಿಯನ್ನು ಅನುಸರಿಸಿ ದೇವರು ಮೊದಲು ದ್ವಾಪರಯುಗದ ಕೊನೆಯಲ್ಲಿ ಕೃಷ್ಣನಾಗಿ ಜನ್ಮಿಸಿದ್ದಾನೆ. ಮೂರು ಜನ್ಮಗಳು ಪೂರ್ತಿ ಮುಗಿದುಹೋಗುವಷ್ಟರಲ್ಲಿ ದೇವರ ಧರ್ಮಗಳನ್ನು ಪೂರ್ತಿಯಾಗಿ ತಿಳಿಯಬೇಕಾಗಿದೆ. ಮೂರು ಜನ್ಮಗಳಲ್ಲಿ ಧರ್ಮಗಳನ್ನು ಪೂರ್ತಿಯಾಗಿ ತಿಳಿಸಿ, ಅವುಗಳೊಂದಿಗೆ ಮಾನವನು ಧರ್ಮಗಳೆಂದು ತಿಳಿದು ಆಚರಿಸುವ ಅಧರ್ಮಗಳನ್ನೂ ಸಹ ತಿಳಿಸುವುದರಿಂದ ಧರ್ಮಗಳಿಗೆ ಪೂರ್ತಿ ಬೆಲೆ ಏರ್ಪಡುತ್ತದೆ. ಅದರಿಂದ ದೇವರು ತನ್ನ ಮೂರು ಅವತಾರಗಳಲ್ಲಿ ಇತ್ತ ಧರ್ಮಗಳನ್ನೂ, ಅತ್ತ ಅಧರ್ಮಗಳನ್ನು ತಿಳಿಸುತ್ತಾನೆ. ಹಾಗೆ ತಿಳಿಸುವುದರಿಂದ ಮನುಷ್ಯರಲ್ಲಿ ಬಹಳಜನ ಅಧರ್ಮಗಳನ್ನು ಬಿಟ್ಟು ಧರ್ಮಗಳನ್ನು ಆಶ್ರಯಿಸುತ್ತಾರೆ. ಆಗ ಧರ್ಮಗಳು ಪುನಃ ಆಚರಣೆಯೊಳಗೆ ಬರುತ್ತವೆ.

ದೇವರು ಭಗವಂತನಾಗಿ ಕೃಷ್ಣನ ರೂಪದಲ್ಲಿ ಬಂದು ತನ್ನ ಮೊದಲ ಅವತಾರವನ್ನು ಪೂರ್ತಿ ಮಾಡಿಕೊಂಡಿದ್ದಾನೆ. ಅಷ್ಟೇ ಅಲ್ಲದೆ ತನ್ನ ಎರಡನೆ ಅವತಾರವನ್ನು ಸಹ ಪೂರ್ತಿ ಮಾಡಿಕೊಂಡಂತೆ ಸ್ವಲ್ಪ ಅರ್ಥವಾಗುತ್ತದೆ. ಇನ್ನು ಮೂರನೇಯದು ಪೂರ್ತಿ ಮಾಡಿಕೊಳ್ಳ ಬೇಕಾಗಿದೆ. ಮೊದಲ ಅವತಾರದ ನಂತರ ಇನ್ನು ಎರಡನೆಸಾರಿ ಬಂದು ಹೇಳುವ ಕೆಲಸವಿರುವುದರಿಂದ, ಮೊದಲ ಅವತಾರದಲ್ಲಿ ಭಗವದ್ಗೀತೆಯನ್ನು ಹೇಳಿ ಅದರಲ್ಲಿ ಧರ್ಮಗಳನ್ನು, ಅಧರ್ಮ ಗಳನ್ನು ಸಹ ಹೇಳಿಹೋಗುವುದು ನಡೆದಿದೆ. ಆದರೆ ಆತನು ಹೇಳಿದ ಜ್ಞಾನವನ್ನು ಮನುಷ್ಯರೆಲ್ಲರಿಗೂ ಹೇಳದಂತೆ ಕೇವಲ ಒಬ್ಬ ಅರ್ಜುನನಿಗೆ ಮಾತ್ರವೆ ಹೇಳಿದ್ದಾನೆ. ಕೃಷ್ಣನು ತನ್ನ 120 ವರ್ಷಗಳ ಜೀವನದಲ್ಲಿ 90ನೇ ವರ್ಷದಲ್ಲಿ ಭಗವದ್ಗೀತೆಯನ್ನು ಹೇಳಿದ್ದಾನೆ. ಯುದ್ಧರಂಗದಲ್ಲಿ ಪಕ್ಕದ ಮನುಷ್ಯನೂ ಸಹ ಕೇಳುವುದಕ್ಕೆ ಅವಕಾಶವಿಲ್ಲದಂತೆ ಒಂದೇಬಾರಿ ಹೇಳಿದ ಕೃಷ್ಣನು ನಂತರ ಎರಡನೆಬಾರಿ ಯಾವಾಗಲೂ ಹೇಳಲಿಲ್ಲ. ಹಾಗೆ ಹೇಳುವುದರಿಂದ ಅದು ಪ್ರಾರಂಭ ಅವತಾರದಲ್ಲಿ ಜ್ಞಾನವನ್ನು ಸಾಕ್ಷ್ಯಕ್ಕೆ ಮಾತ್ರವೆ ಹೇಳಿ ನಂತರ ಅವತಾರಗಳಲ್ಲಿ ಹೆಚ್ಚಾಗಿ ಹೇಳಿದ್ದಾನೆಂದು ಅರ್ಥವಾಗುತ್ತದೆ. ಮೊದಲ ಅವತಾರದಲ್ಲಿ ಹೇಳಿರುವವು ಧರ್ಮಗಳೇ ಆದರೂ, ಅವುಗಳನ್ನು ಆ ಜನ್ಮದಲ್ಲಿ ಮತ್ತೆ ಮತ್ತೆ ಹೇಳಲಿಲ್ಲ. ಅಷ್ಟೇ ಅಲ್ಲದೆ ಅರ್ಜುನನಿಗೆ ಮಾತ್ರ ನಿರೂಪಣೆಗಾಗಿ ಹೇಳಿ, ಉಳಿದವರಿಗೆ ಯಾರಿಗೂ ಹೇಳದ ಹಾಗೆ ತಿಳಿಯುತ್ತದೆ. ಆ ದಿನ ವ್ಯಾಸನ ಮೂಲಕ ಅಧರ್ಮ ಗಳಾದ ವೇದಗಳು, ಪುರಾಣಗಳು ಬರೆಯಲಾಗಿರುವುದರಿಂದ, ಅರ್ಜುನನು ಕೇಳಿದ ವಿಷಯವನ್ನು ವ್ಯಾಸನಿಗೆ ತಿಳಿಯುವುದಕ್ಕೆ, ಅರ್ಜುನನು ವ್ಯಾಸನ ಹತ್ತಿರ ಹೇಳುವಂತೆ ಕೃಷ್ಣನು ಅರ್ಜುನನಿಗೆ ತಿಳಿಯದಂತೆಯೇ ಅಂತರಂಗದಲ್ಲಿಯೆ ಅರ್ಜುನನನ್ನು ಪ್ರೇರೇಪಿಸಿದಂತೆ ಅರ್ಥವಾಗುತ್ತದೆ. ತಾನು ಯುದ್ಧರಂಗದಲ್ಲಿ ಕೃಷ್ಣನ ಮೂಲಕ ನೋಡಿರುವುದು, ಕೇಳಿರುವುದು ಎಲ್ಲವನ್ನು ವ್ಯಾಸನಿಗೆ ಹೇಳಬೇಕೆಂದು ಅರ್ಜುನನು ಅಂದುಕೊಂಡು ಹೇಳುವುದು ನಡೆದಿದೆ. ಹಾಗೆ ಕೃಷ್ಣನು ತನ್ನ ಜ್ಞಾನ ವ್ಯಾಸನಿಗೆ ತಿಳಿಯುವಂತೆ ಮಾಡಿದ್ದಾನೆ. ಅರ್ಜುನನ ಮೂಲಕ ಕೇಳಿದ ವ್ಯಾಸನು, ತಾನು ಕೇಳಿದ ವಿಷಯವು ಬಹಳ ಉತ್ತಮ

ವಾದದ್ದೆಂದು ತಿಳಿದು, ತಾನು ಮೊದಲು ಬರೆದವುಗಳಿಗೆ ವಿರುದ್ಧವಾಗಿ ಇದ್ದರು ಅವುಗಳೆ ಸತ್ಯವಾದವೆಂದು ತಿಳಿದು, ಕೃಷ್ಣನ ಜ್ಞಾನವನ್ನು ಭಗವದ್ಗೀತೆ ಎಂಬ ಗ್ರಂಥರೂಪದಲ್ಲಿ ಬರೆದಿಟ್ಟಿದ್ದಾನೆ. ದೇವರು ತನ್ನ ಮೊದಲ ಜನ್ಮದಲ್ಲಿ ಧರ್ಮಗಳನ್ನು, ಅಧರ್ಮಗಳನ್ನು ಅರ್ಜುನನಿಗೆ ತಿಳಿಸುವುದಲ್ಲದೆ ಆತನೇ ನಿಜವಾದ ದೇವರೆಂದು, ದೇವರು ತನ್ನ ಧರ್ಮಗಳನ್ನು ತಿಳಿಸುವುದಕ್ಕೆ ಅವತರಿಸುತ್ತಾನೆಂದು ಸಾಕ್ಷಿಯಾಗಿ ತಿಳಿಯುವಂತೆ ತನ್ನ ನಿಜ ರೂಪವಾದ ವಿಶ್ವರೂಪವನ್ನು ಅರ್ಜುನನಿಗೆ ತೋರಿಸಿದ್ದಾನೆ. ತನ್ನ ನಿಜರೂಪ ಯಾರಿಗೂ ತಿಳಿದಿಲ್ಲ. ಆದುದರಿಂದ ಕೃಷ್ಣನೇ ಅರ್ಜುನನಿಗೆ ಜ್ಞಾನ ದೃಷ್ಟಿಕೊಟ್ಟು ದೈವಸ್ವರೂಪ ಹೇಗಿರುತ್ತದೋ ಅರ್ಥವಾಗುವಂತೆ ಮಾಡಿದ್ದಾನೆ. ಜ್ಞಾನದೃಷ್ಟಿ ದೃಶ್ಯವನ್ನು ನೋಡುವುದಿಲ್ಲ. ಆದರೆ ದೃಶ್ಯವನ್ನು ಅವಗಾಹನೆ ಮಾಡಿಕೊಳ್ಳುವುದು. ಆ ವಿಧವಾಗಿ ದೇವರು ಜ್ಞಾನದೃಷ್ಟಿಯನ್ನು ಅರ್ಜುನನಿಗೆ ಕೊಟ್ಟು ತನ್ನ ಸ್ವರೂಪವನ್ನು ನಮಗೆ ಸ್ವಲ್ಪ ಅರ್ಥವಾಗುವಂತೆ ಮಾಡಿದ್ದಾನೆ. ನಂತರ ಬರುವ ಎರಡು ಅವತಾರಗಳಲ್ಲಿ ಹೆಚ್ಚಾಗಿ ಹೇಳುವುದಕ್ಕೆ, ಹಿಂದೆ ಹೇಳಿದ ಬೋಧನೆ ಆಧಾರವಾಗಿರುವಂತೆ ಅರ್ಜುನನಿಗೆ ಮಾತ್ರ ಹೇಳಿಹೋಗುವುದು, ಅದನ್ನೇ ವ್ಯಾಸನು ಗ್ರಂಥರೂಪವಾಗಿ ಮಾಡಿದ್ದಾನೆ. ದೇವರು ನಂತರ ಬರುವಂತಹ ಎರಡು ಅವತಾರಗಳಲ್ಲಿ ಹೇಳುವುದಕ್ಕೆ ಅವಕಾಶ ಇರುವಂತೆ ಅರ್ಜುನನಿಗೆ ಮಾತ್ರ ಬೋಧಿಸಿದ್ದಾನೆಂದು ತಿಳಿಯುತ್ತದೆ.

ದೇವರು ಮೂರುಬಾರಿ ಬಂದರೆ ಒಂದುಬಾರಿ ಪೂರ್ತಿ ಬಂದಂತೆ ಲೆಕ್ಕಿಸಲ್ಪಡುತ್ತದೆ ಎನ್ನುವುದಕ್ಕೆ ಆಧಾರವೇನಾದರು ಇದೆಯಾ? ಎಂದು ಯಾರಾದರೂ ಪ್ರಶ್ನಿಸಿದರೆ ನನ್ನ ಹತ್ತಿರ ಅದಕ್ಕೆ ಉತ್ತರ ಇಲ್ಲವೆಂದು ಹೇಳಬಹುದು. ದೇವರ ವಿಷಯದಲ್ಲಿ ಆತನೇ ಹೇಳಿದರೆ ಹೊರತು, ಮೊದಲು ನಾವು ಹೇಳುವುದಕ್ಕೆ ಸಾಧ್ಯವಿಲ್ಲ. ಬಂದ ನಂತರ ನಾನು ಇಂತಹವನೆಂದು ಆತನು ಹೇಳಬೇಕಾಗಿದ್ದೆ, ಆದರೆ ನಾವು ಈತನು ಇಂತಹವನು ದೇವರೆಂದು ಹೇಳಲಾರೆವು. ಆತನು ಒಂದುಬಾರಿ ಬಂದಿದ್ದಾನೆ, ತನ್ನ ಜ್ಞಾನವನ್ನು ಹೊರಗಿಟ್ಟು

ಹೋಗಿದ್ದಾನೆ. ಮನುಷ್ಯರ್‍ಯಾರಿಗೂ ಅದನ್ನು ಬೋಧಿಸದೆ ಒಬ್ಬ ಅರ್ಜುನನಿಗೆ ಮಾತ್ರ ಹೇಳಿಹೋಗಿದ್ದಾನೆಂದರೆ, ಹೇಳಿದ ವಿಷಯವನ್ನು ನಂತರ ಎಲ್ಲರಿಗೂ ವಿಶಧೀಕರಿಸಿ ಹೇಳುತ್ತಾನೆಂದು ತಿಳಿಯುತ್ತದೆ. ನಂತರ ಬರಬೇಕೆಂಬ ಉದ್ದೇಶ ದಿಂದಲೇ ಆರಂಭದಲ್ಲಿ ತಾನು ಹೇಳಬೇಕಾಗಿರುವುದನ್ನು ಹೇಳಿಹೋಗಿದ್ದಾನೆ. ಮೊದಲು ಹೇಳಿದಾಗ ಧರ್ಮಗಳನ್ನು, ಅಧರ್ಮಗಳನ್ನು ಹೇಳಿಹೋಗಿದ್ದಾನೆ. ಅವು ಯಾವುವು ಯಾರಿಗೂ ಅರ್ಥವಾಗಲಿಲ್ಲ. ದೇವರು ಅಧರ್ಮಗಳನ್ನು ಇಲ್ಲದಂತೆ ಮಾಡುವುದಕ್ಕೆ, ಧರ್ಮಗಳನ್ನು ನೆಲೆಗೊಳಿಸುವುದಕ್ಕೆ ಆತನೆ ಮನುಷ್ಯರಿಗೆ ಅವುಗಳನ್ನು ಕುರಿತು ಪೂರ್ತಿಯಾಗಿ ವಿಶಧೀಕರಿಸಿ ಹೇಳಬೇಕಾಗಿದೆ. ಹಾಗೆ ಆತನು ಕೃಷ್ಣನ ಜನ್ಮದಲ್ಲಿ ಧರ್ಮಗಳನ್ನು ವಿಶಧೀಕರಿಸಿ ಪ್ರಜೆಗಳಿಗೆ ಹೇಳಿದಂತೆ ಇಲ್ಲ. ಧರ್ಮಗಳನ್ನು ನೆಲೆಗೊಳಿಸುವುದಕ್ಕೆ ಬಂದವನು ಯಾರಿಗೊ ಮರೆಯಲ್ಲಿ ಹೇಳಿಹೋದರೆ ಧರ್ಮಗಳು ಪ್ರತಿಷ್ಠಿಸಲ್ಪಡುತ್ತವಾ? ಅಧರ್ಮಗಳಿಗೆ ಅಭ್ಯಾಸ ವಾದವರಿಗೆ ಅವರು ಮಾಡುತ್ತಿರುವ ತಪ್ಪು ಏನೋ? ವಿಶಧೀಕರಿಸಿದರೆ ತಿಳಿಯುತ್ತದೆ. ಅಂತಹದರಲ್ಲಿ ಯಾರಿಗೂ ತಿಳಿಯದಂತೆ ಒಂದುಬಾರಿ ಹೇಳಿ ಇನ್ನು ನನ್ನ ಕೆಲಸ ಮುಗಿದುಹೋಗಿದೆ ಎಂದುಕೊಂಡರೆ ಸರಿಹೋಗುವುದಿಲ್ಲ ಅಲ್ಲವೆ! ಬಂದಿರುವ ಕೆಲಸ ಪೂರ್ತಿಯಾಗುವುದಿಲ್ಲ ಅಲ್ಲವೆ! ಈಗ ನಾವು ಕೃಷ್ಣನು ಆ ದಿನ ಹೇಳಿಹೋದ ಧರ್ಮಗಳನ್ನು ಪ್ರತ್ಯಕ್ಷವಾಗಿ ಕೂಗಿ ಹೇಳುತ್ತಿದ್ದರೆ, ನಿನ್ನದು ನಮ್ಮ ಮತವೇ ಅಲ್ಲ ಬೇರೆ ಮತವೆಂಬ ಮನುಷ್ಯರಿರುವಾಗ, ಯಾರಿಗೂ ತಿಳಿಯದಂತೆ ಅವನೊಬ್ಬನಿಗೆ, ಒಂದೇ ಒಂದುಬಾರಿ ಹೇಳಿದರೆ ಅದನ್ನು ಪ್ರಜೆಗಳು ಕೇಳುತ್ತಾರಾ? ಕೇಳಿ ಒಪ್ಪಿಕೊಳ್ಳುತ್ತಾರಾ? ತಾವು ಮಾಡುತ್ತಿರುವುದೆ ಸರಿಯಾದ ಯೋಗವೆಂದು, ತಮಗೆ ತಿಳಿದಿರುವುದೆ ನಿಜವಾದ ಜ್ಞಾನವೆಂದು, ಅಧರ್ಮಗಳನ್ನು ಬೋಧಿಸುವ ಗುರುಗಳು ಆಲದ ಮರದಂತೆ ಬೇರುಗಳ ಊಡುಗಳೊಂದಿಗೆ ಸಹ ಸ್ಥಿರಗೊಂಡಿದ್ದರೆ, ತಮಗೆ ಸರಿಹೋಗದ ಜ್ಞಾನವನ್ನು ಹೇಳಿದರೆ ಹೇಳುವುದು ಏನೆಂದು ಆಲೋಚಿಸದಂತೆ, ತಮ್ಮ ಉದ್ದೇಶವನ್ನು ಕಾಪಾಡಿಕೊಳ್ಳುವುದಕ್ಕೆ ಇದು ಪರಮತ ಜ್ಞಾನವೆಂದು, ಬೋಧಿಸುವವನು ಹಿಂದೂಮತ ಮುಸುಗಿ ನಲ್ಲಿರುವ ಬೇರೆಯವನೆಂದು ಪ್ರಜೆಗಳಿಗೆ ಹೇಳಿ, ಸ್ವಲ್ಪವೂ ಆಲೋಚಿಸದ

ಮನುಷ್ಯರನ್ನು ಪ್ರೇರೇಪಿಸಿ ಏನಾದರೂ ಮಾಡುತ್ತಾರೆ. ಗೀತೆಯಲ್ಲಿ ಹೇಳಿದ ವಿಷಯವನ್ನು ಹೇಳಿದರೇನೆ ವಿಚಕ್ಷಣೆ ಇಲ್ಲದ ಮನುಷ್ಯರು, ಹಿಂದೂ ರಕ್ಷಣಾ ಸಂಘಗಳೆಂಬ ಹೆಸರಿನಿಂದಿರುವವರು, ಎಷ್ಟೋಬಾರಿ ನಮ್ಮ ಮೇಲೆ ದಾಳಿಗೆ ಬಂದ ಸಂಘಟನೆಗಳಿವೆ.

ಭೂಮಿಮೇಲೆ ಯಾವ ಮತ ಇದ್ದರೂ, ಎಷ್ಟು ಮತಗಳಿದ್ದರೂ, ಎಲ್ಲವುಗಳಲ್ಲಿಯೂ ದೇವರ ಧರ್ಮಗಳು ಒಂದಾಗಿಯೇ ಇರುತ್ತವೆ. ಎಲ್ಲ ಮತಗಳಿಗೂ ದೇವರು ಒಬ್ಬನೇ ಆದಾಗ, ಯಾವ ಮತದಲ್ಲಿಯಾದರು ದೇವರ ಧರ್ಮಗಳು ಒಂದೇ ವಿಧವಾಗಿರುತ್ತವೆ. ಬೇರೆ ಬೇರೆ ಮತಗಳಿಗೆ ಬೇರೆ ಬೇರೆ ದೇವರು ಎಂದಾಗಲಿ, ಬೇರೆ ಬೇರೆ ಧರ್ಮಗಳು ಎಂದಾಗಲಿ ಇರುವುದಿಲ್ಲ. ದೇವರ ವಿಧಾನ, ಜ್ಞಾನ ತಿಳಿಯದ ಮನುಷ್ಯರು ಮತಬೇಧಗಳಿಂದ ಬದುಕುತ್ತಿದ್ದರೂ, ಬೇಧಗಳೆಲ್ಲವೂ ಮನುಷ್ಯರಲ್ಲಿ ಮತಗಳಲ್ಲಿ ಇರಬಹುದೇನೋ ಆಗಲಿ, ದೇವರಲ್ಲಾಗಲಿ, ದೇವರ ಧರ್ಮಗಳಲ್ಲಾಗಲಿ ಯಾವುವು ಇಲ್ಲ. ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ, ದೇವರ ಧರ್ಮಗಳು, ದೇವರೂ ಎಂದಿಗೂ ಬದಲಾಗದ ವಿಧವಾಗಿ ಇದ್ದರೂ, ಅಧರ್ಮಗಳು ಮಾತ್ರ ಒಂದೊಂದು ಮತದಲ್ಲಿ ಒಂದೊಂದು ವಿಧವಾಗಿ ಮನುಷ್ಯರು ಸ್ವಲ್ಪವೂ ಗುರುತಿಸದಂತೆ ವ್ಯಾಪಿಸಿವೆ. ಉದಾಹರಣೆಗೆ ಹಿಂದೂ (ಇಂದೂ) ಮತದಲ್ಲಿ ನಾಲ್ಕು ಧರ್ಮಗಳು ನಾಲ್ಕು ವಿಧಗಳ ಕಾರ್ಯಚರಣೆಗಳಲ್ಲಿರುವಾಗ, ಇವೆ ನಾಲ್ಕು ಅಧರ್ಮಗಳು ಮತ್ತೊಂದು ಮತದಲ್ಲಿ ಮತ್ತೊಂದು ಕಾರ್ಯಾಚರಣೆಗಳು ಹೊಂದಿ ಇವು ಅಧರ್ಮಗಳೆಂದು ಯಾರು ಗುರ್ತಿಸಲಾರದ ವಿಧವಾಗಿ ಬೆರೆತುಹೋಗಿವೆ. ಇಸ್ಲಾಮ್ ಮತದಲ್ಲಿ ಇಬ್ಲೀಸ್ (ಸೈತಾನ್) ಎಂದು, ಕ್ರೈಸ್ತಮತ ದಲ್ಲಿ ಸಾತಾನ್ ಎಂದು ಅಧರ್ಮಗಳನ್ನು ಅನ್ನುತ್ತಿದ್ದರೂ, ಹಿಂದೂ ಮತದಲ್ಲಿ ಮಾಯೆ ಎಂದು ಅನ್ನುತ್ತಿದ್ದರೂ ಎಲ್ಲ ಮತಗಳಲ್ಲಿ ಬೇರೆ ಬೇರೆ ಹೊಗಳಿಕೆಗಳು ಹೊಂದಿರುವುದರಿಂದ ಅಧರ್ಮಗಳನ್ನು ಸುಲಭವಾಗಿ ಯಾರೂ ಗುರುತಿ ಸಲಾರರೆಂದು ಹೇಳಬಹುದು. ಅಧರ್ಮಗಳು ಎಷ್ಟು ಮತಗಳಲ್ಲಿ ಇದ್ದರೂ

ದೇವರನ್ನು ತಿಳಿಯದಂತೆ ಮಾಡಿ, ದೇವರಿಗೆ ದೂರವಾಗಿ ಕಳುಹಿಸುವುದೆ ಕೆಲಸವಾಗಿದೆ. ಹಾಗೆಯೇ ಧರ್ಮಗಳು ದೇವರನ್ನು ತಿಳಿಯುವಂತೆ ಮಾಡಿ ದೇವರಿಗೆ ಹತ್ತಿರ ಮಾಡುವುದೆ ಕೆಲಸವಾಗಿದೆ.

ವಾಸ್ತವವಾಗಿ ಹೇಳಬೇಕೆಂದರೆ ನಾಲ್ಕು ಅಧರ್ಮಗಳು ನಾಲ್ಕು ಕ್ರೂರ ಮೃಗಗಳಂತೆ ಭೂಮಂಡಲವೆಂಬ ಕಾಡಿನಲ್ಲಿ ಇಷ್ಟಾನುಸಾರ ತಿರುಗುತ್ತವೆಯೆಂದು ಹೇಳಬಹುದು. ನಾಲ್ಕು ಕ್ರೂರಮೃಗಗಳು ರಾಜ್ಯವಾಳುವ ಅರಣ್ಯದೊಳಗೆ ಮೂರು ಸಾಧುಜಂತುಗಳಾದ ಹಸುಗಳನ್ನು ಕಳುಹಿಸಿದರೆ ಎಷ್ಟು ಅಪಾಯವೋ ಹೇಳಬೇಕಾದ ಅವಶ್ಯಕತೆಯಿಲ್ಲ. ನಾಲ್ಕು ಕ್ರೂರಮೃಗಳಿರುವ ಕಾಡಿನೊಳಗೆ ಹೋಗಿ ಆ ಕಾಡಿನಲ್ಲಿ ಬೆಳೆದ ಹುಲ್ಲನ್ನು ನನ್ನ ಹಸುಗಳಿಗೆ (ಮೇವು) ಆಹಾರವಾಗಿ ಕೊಟ್ಟು, ಕಾಡಿನಲ್ಲಿ ಬೆಳೆದ ಹುಲ್ಲನ್ನು ಇಲ್ಲದಂತೆ ಮಾಡುತ್ತೇನೆಂದು ಒಬ್ಬ ವ್ಯಕ್ತಿ ಅಂದುಕೊಂಡನಂತೆ. ಕಾಡಿನಲ್ಲಿ ಮೃಗಗಳಿರುವುದರಿಂದ ಹುಲ್ಲನ್ನು ತಿನ್ನುವ ಚಿಕ್ಕ ಚಿಕ್ಕ ಪ್ರಾಣಿಗಳು, ಜಿಂಕೆಗಳು, ಮೊಲಗಳಂತಹವು ಯಾವುವು ಬದುಕುತ್ತಿಲ್ಲ. ಆದ್ದರಿಂದ ಕಾಡಿನಲ್ಲಿ ಹುಲ್ಲು ವಿಪರೀತವಾಗಿ ಬೆಳೆದುಹೋಗಿದೆ. ಒಬ್ಬನು ತನ್ನ ಮೂರು ಹಸುಗಳನ್ನು ತೆಗೆದುಕೊಂಡು ಅರಣ್ಯದೊಳಗೆ ಹೋದರೆ ಕ್ರೂರಮೃಗಗಳು ತನ್ನಮೇಲೆ, ತನ್ನ ಹಸುಗಳ ಮೇಲೆ ದಾಳಿ ಮಾಡದಂತೆ ಜಾಗ್ರತೆಗಳನ್ನು ತೆಗೆದುಕೊಳ್ಳಬೇಕು. ಹಾಗಲ್ಲದೆಹೋದರೆ ಹುಲ್ಲು ಮುಗಿದುಹೋಗುವುದಿಲ್ಲ, ಹಸುಗಳು ಬದುಕುವುದಿಲ್ಲ.

ಕ್ರೂರಮೃಗಗಳಿರುವ ಕಾಡಿನೊಳಗೆ ಹಸುಗಳಾಗಲಿ, ಹಸುಗಳನ್ನು ಕಾಯುವವನಾಗಲಿ ಬಂದರೆ ಎಷ್ಟು ಅಪಾಯವೊ ತಿಳಿದ ಭಗವಂತನು, ತನ್ನ ಮೊದಲ ಜನ್ಮದಲ್ಲಿ ಕಾಡಿನೊಳಗೆ ಒಂದುಬಾರಿ ಬಂದು, ತನ್ನ ಹಸುಗಳಿಗೆ ಹುಲ್ಲನ್ನು ತೋರಿಸಿ ತಕ್ಷಣ ಹೊರಗೆಹೋಗಿದ್ದಾನೆ. ಅರಣ್ಯದೊಳಗೆ ಹಸುಗಳನ್ನು ಹೊಡೆದುಕೊಂಡು ಹೋಗಿದ್ದೇನೆಯೆಂದು ಅನಿಸಿಕೊಂಡಿದ್ದಾನೆ. ಆದರೆ ಅಲ್ಲಿನ ಅಪಾಯವನ್ನು ಗುರುತಿಸಿದ ಆತನು ಕಾಡನ್ನು ಹಸುಗಳಿಗೆ ತೋರಿಸಿ ತಕ್ಷಣ ಹಿಂದಿರುಗಿ ಬರುವುದು ನಡೆದಿದೆ. ಒಂದುಬಾರಿ ಹೋಗಿರುವುದರಿಂದ ಕಾಡಿನಲ್ಲಿ

ಹುಲ್ಲನ್ನು ಕೊಯ್ಯಲಿಲ್ಲ, ಹಸುಗಳನ್ನು ಮೇಯಿಸಲು ಇಲ್ಲ. ಹಸುಗಳ ಕಾವಲುಗಾರ (ಕಾಪರಿ) ಒಂದುಬಾರಿ ಅರಣ್ಯದೊಳಗೆ ಹೋಗಿಬಂದಾಗ ಕಾಡು ಮೊದಲು ಹೇಗಿದೆಯೋ ಹಾಗೆ ಇದೆ. ಮೊದಲು ಹೋದಾಗ ಹಸುಗಳನ್ನು ಮೇಯಿಸಲೇ ಇಲ್ಲ. ಆದ್ದರಿಂದ ಹೇಗಿರುವ ಹುಲ್ಲು ಹಾಗೇ ಇದೆ. ಹಸುಗಳ ಕಾವಲುಗಾರ (ಕಾಪರಿ) ತನ್ನ ಪಥಕದ ಪ್ರಕಾರ ಮೂರನೆಬಾರಿ ಕಾಡಿನೊಳಗೆ ಹೋಗಿ ಒಟ್ಟಾರೆ ಹುಲ್ಲನ್ನೆಲ್ಲವನ್ನು ತನ್ನ ಹಸುಗಳಿಂದ ಮೇಯಿಸಿ ಇಲ್ಲದಂತೆ ಮಾಡಬೇಕು. ಆದರೆ ಒಂದುಬಾರಿ ಹಸುಗಳ ಕಾವಲುಗಾರ ಅರಣ್ಯದೊಳಗೆ ತನ್ನ ಹಸುಗಳನ್ನು ಕರೆದುಕೊಂಡುಹೋಗಿ ತಕ್ಷಣ ಹಿಂದಿರುಗಿ ಬಂದಿದ್ದಾನೆ. ಒಂದುಬಾರಿ ಕಾಡಿನೊಳಗೆ ಹೋಗಿದಕ್ಕೆ ಹಸುಗಳು ಹುಲ್ಲನ್ನು ನೋಡಿದವು. ಅಷ್ಟು ಹೊರತು ಏನು ನಡೆಯಲಿಲ್ಲ. ಸ್ವಲ್ಪಕಾಲ ಕಳೆದಿದೆ. ನಂತರ ಪಶುಗಳ ಕಾವಲುಗಾರ ಎರಡನೆಬಾರಿ ಕಾಡಿನೊಳಗೆ ಹೋಗಿ ಹುಲ್ಲನ್ನು ಮೇಯಿಸುವ ಕೆಲಸವನ್ನು ಮಾಡಬೇಕೆಂದುಕೊಂಡಿದ್ದಾನೆ.

ಎರಡನೇ ಬಾರಿ ತನ್ನ ಹಸುಗಳನ್ನು ಅರಣ್ಯದೊಳಗೆ ಕರೆದುಕೊಂಡು ಹೋಗಿ ಅರಣ್ಯದಲ್ಲಿ ತಿರುಗುತ್ತಾ ಹುಲ್ಲನ್ನು ಮೇಯಿಸುವುದು ಪ್ರಾರಂಭ ಮಾಡಿದ್ದಾನೆ. ಕೇವಲ ಮೂರು ದಿನಗಳು ನಿರಾತಂಕವಾಗಿ ಹಸುಗಳಿಂದ ಹುಲ್ಲನ್ನು ಮೇಯಿಸಿದ್ದಾನೆ. ಮೂರುದಿನಗಳಿಗೆ ಮೂರು ಹಸುಗಳು ಹೊಟ್ಟೆತುಂಬ ಹುಲ್ಲು ಮೇದರೂ ಸ್ವಲ್ಪ ಹುಲ್ಲು ಮಾತ್ರ ಮುಗಿದಿದೆ. ಹುಲ್ಲು ಎಲ್ಲಾ ಮುಗಿದುಹೋಗ ಬೇಕೆಂದರೆ ಕನಿಷ್ಟ ಆರುತಿಂಗಳ ಕಾಲವಾದರೂ ಹಿಡಿಯುತ್ತದೆ. ಅಷ್ಟರಲ್ಲಿಯೇ ನಾಲ್ಕು ಕ್ರೂರ ಜಂತುಗಳು ಮೂರು ಹಸುಗಳನ್ನು, ಹಸುಗಳ ಕಾವಲುಗಾರನ ಮೇಲೆ ಕಣ್ಣು ಹಾಕಿವೆ. ಪಶುಗಳು ಕಾವಲುಗಾರ ತನ್ನ ಪಶುಗಳಿಗೆ ಕಾವಲಾಗಿದ್ದಾನೆ ಆದ್ದರಿಂದ ಮೃಗಗಳು ಹಸುಗಳ ಮೇಲೆ ದಾಳಿಮಾಡುವುದಕ್ಕೆ ಅವಕಾಶವಿಲ್ಲ. ಮೃಗಗಳು ದಾಳಿಮಾಡಿದರೆ ಮೊದಲು ಕಾವಲುಗಾರನ ಮೇಲೆ ದಾಳಿ ಮಾಡಬೇಕು. ಕ್ರೂರಮೃಗಗಳು ಕಾದುಕೊಂಡು ಮೊದಲು ಪಶುಗಳ ಕಾವಲು ಗಾರನ ಮೇಲೆ ದಾಳಿಮಾಡಬೇಕು. ಆ ದಾಳಿಯಲ್ಲಿ ಕಾವಲುಗಾರ ಸ್ವಲ್ಪಮಟ್ಟಿಗೆ

ಗಾಯಪಟ್ಟು ಮರಣಿಸಿದ್ದಾನೆ. ಕಾವಲುಗಾರನ ಮೇಲೆ ದಾಳಿ ಮಾಡಿದಾಗ ಮೂರು ಹಸುಗಳು ಓಡಿಹೋಗಿ ಅರಣ್ಯದ ಹೊರಗೆ ಬಂದು ಮನೆಗಳು ಸೇರಿಕೊಂಡಿವೆ. ಕಾವಲುಗಾರನ ಮೇಲೆ ದಾಳಿಮಾಡಿದ ಮೃಗಗಳು ಮರಣಿಸಿದ ಕಾವಲುಗಾರನನ್ನು ಬಿಟ್ಟು ಹಸುಗಳಿಗೋಸ್ಕರ ಹುಡುಕತೊಡಗಿದವು. ಆದರೆ ಹಸುಗಳು ಅವುಗಳಿಗೆ ಸಿಗಲಿಲ್ಲ. ಹಸುಗಳ ಕಾವಲುಗಾರ ಕ್ರೂರಮೃಗಗಳ ದಾಳಿಗೆ ಮರಣ ಹೊಂದಿರುವುದು ನಿಜವೇ ಆದರೂ, ಅದು ಪೂರ್ತಿ ಮರಣವಲ್ಲ. ಮೂರು ಮರಣಗಳಲ್ಲಿ ಒಂದಾದ ತಾತ್ಕಾಲಿಕ ಮರಣವನ್ನು ಹೊಂದಿರುವುದರಿಂದ, ಕಾವಲುಗಾರ ಎರಡು ದಿನಗಳ ನಂತರ ಮೂರನೆ ದಿನ ಪುನಃ ಸಜೀವವಾಗಿದ್ದಾನೆ. ಸಜೀವವಾಗಿ ಅರಣ್ಯದಲ್ಲಿ ಎದ್ದ ನಂತರ ಪುನಃ ಊರಿನೊಳಗೆ ಬಂದಿದ್ದಾನೆ. ಮೊದಲಬಾರಿ ಹೋದಾಗ ಅರಣ್ಯದಲ್ಲಿ ಕ್ರೂರಮೃಗಳಿವೆ ಎಂದು ತಿಳಿದು ತಕ್ಷಣ ಹಿಂತಿರುಗಿ ಬರುವುದು ನಡೆದಿದೆ. ಎರಡನೆಬಾರಿ ತಕ್ಕ ಪಥಕದಲ್ಲಿ ಹೋದರು ಮೃಗಗಳು ದಾಳಿ ಮಾಡುವುದು ನಡೆದಿದೆ. ಆದರೂ ಹಸುಗಳಿಗೆ ಏನು ಆಗಲಿಲ್ಲ. ಸ್ವಲ್ಪಕಾಲ ಕಳೆದಿದೆ. ಪಶುಗಳ ಕಾವಲುಗಾರ ಮೂರನೆಬಾರಿ ಒಳ್ಳೆಯ ಊಹಾ ರಚನೆಯಿಂದ ತನ್ನ ಹಸುಗಳನ್ನು ಅರಣ್ಯದೊಳಗೆ ತೆಗೆದುಕೊಂಡು ಹೋಗಬೇಕೆಂದುಕೊಂಡಿದ್ದಾನೆ.

ಮೂರನೇಬಾರಿ ಪಶುಗಳ ಕಾವಲುಗಾರ ತನ್ನ ಮೂರು ಹಸುಗಳನ್ನು ಕರೆದುಕೊಂಡು ಅರಣ್ಯದೊಳಗೆ ಹೋದನು. ಆದರೆ ಈ ಬಾರಿ ಕಾವಲುಗಾರ ಒಂದು ದೊಡ್ಡ ವ್ಯೂಹದಿಂದ ಅರಣ್ಯದೊಳಗೆ ಹೋಗುವುದು ನಡೆದಿದೆ. ತನ್ನ ವ್ಯೂಹದ ಪ್ರಕಾರ ತನ್ನ ಹಸುಗಳು ಸಾಧು ಜಂತುಗಳು ಅಲ್ಲ, ಅವು ಸಹ ಕ್ರೂರ ಮೃಗಗಳಾದಂತೆ ಹಸುಗಳಿಗೆ ಹುಲಿಚರ್ಮವನ್ನು ಹೊದ್ದಿಸಿ, ಸಾಕ್ಷಾತ್ ಹುಲಿಯಂತೆ ಕಾಣಿಸುವಂತೆ ತಯಾರು ಮಾಡಿದ್ದಾನೆ. ಹುಲಿ ವೇಶದಲ್ಲಿರುವ ಹಸುಗಳನ್ನು ನೋಡಿ ಉಳಿದ ಕ್ರೂರ ಜಂತುಗಳೆಲ್ಲವೂ ಭಯಪಟ್ಟು ಪಕ್ಕಕ್ಕೆ ಹೋಗಿವೆ. ಹಾಗೆ ಉಳಿದ ಕ್ರೂರ ಜಂತುಗಳು ತನ್ನ ಹಸುಗಳಿಗೆ ಭಯಪಟ್ಟು ಹೋಗುವುದರಿಂದ, ಹಸುಗಳು ಸುಲಭವಾಗಿ ನಿರ್ಭಯವಾಗಿ ಹುಲ್ಲನ್ನು

ಮೇಯಸಾಗಿದವು. ಈಗ ಕಾವಲುಗಾರ ಹಸುಗಳ ಹತ್ತಿರ ಇದ್ದು ಕಾವಲು ಕಾಯಬೇಕಾದ ಕೆಲಸವಿಲ್ಲ. ಆದ್ದರಿಂದ ಹಸುಗಳ ಕಾವಲುಗಾರ ತನ್ನ ಹಸುಗಳಿಗೆ ದೂರವಾಗಿದ್ದು ಹಸುಗಳನ್ನು ನೋಡಿಕೊಳ್ಳುತ್ತಿದ್ದಲ್ಲಿಯೂ, ತನ್ನನ್ನು ಇತರ ಕ್ರೂರ ಮೃಗಗಳು ಗುರುತಿಸದಂತೆ ಎಲೆಗಳಿರುವ ಗಿಡಗಳ ಕೊಂಬೆಗಳನ್ನು ದೇಹವೆಲ್ಲ ಕಟ್ಟಿಕೊಂಡಿದ್ದಾನೆ. ಹಾಗೆ ಎಲೆಗಳಿಂದ ತುಂಬಿದ ಕೊಂಬೆಗಳನ್ನು ಶರೀರಕ್ಕೆ ಕಟ್ಟಿಕೊಳ್ಳುವುದರಿಂದ ಕಾವಲುಗಾರ ಒಂದು ಚಿಕ್ಕ ಗಿಡದಂತೆ ಕಾಣಿಸುತ್ತಿದ್ದಾನೆ. ಎಲ್ಲಿಯಾದರೂ ಯಾವ ಕ್ರೂರ ಮೃಗವಾದರು ಎದುರು ಬಂದರೂ ಕದಲದಂತಿರುವ ಕಾವಲುಗಾರನನ್ನು ನೋಡಿ ಅವು ಆತನನ್ನು ಒಂದು ಗಿಡವೆಂದು ಅಂದುಕೊಳ್ಳುತ್ತಿದ್ದವು. ಎದುರುಬಂದರೂ ಅವು ಆತನನ್ನು ಗುರುತಿಸಲಿಲ್ಲ. ಈ ವಿಧವಾಗಿ ತನ್ನ ಉದ್ದೇಶವನ್ನು ಜಾರಿಗೊಳಿಸಿದ್ದಾನೆ. ಆದುದರಿಂದ ಮೂರನೆಬಾರಿ ಸ್ವಲ್ಪಕಾಲ ನಿರಾಟಂಕವಾಗಿ ಹಸುಗಳು ಹುಲ್ಲನ್ನು ಮೇಯುವುದರಿಂದ ಅರಣ್ಯದಲ್ಲಿನ ಹುಲ್ಲು ಕಡಿಮೆಯಾಗಿದೆ.

ಮೂರನೇ ಬಾರಿ ಅರಣ್ಯದಲ್ಲಿನ ಹುಲ್ಲನೆಲ್ಲಾ ತನ್ನ ಹಸುಗಳಿಂದ ಮೇಯಿಸಿ ಇಲ್ಲದಂತೆ ಮಾಡಬೇಕೆಂದುಕೊಂಡ ಹಸುಗಳ ಕಾವಲುಗಾರನ ಪಥಕ ಫಲಿಸಿದೆ. ಒಂದುಬಾರಿ ಕಾವಲುಗಾರ ಅರಣ್ಯದೊಳಗೆ ಬಂದು ತಕ್ಷಣ ಹೊರಟುಹೋಗುವುದು ನಡೆದಿದೆ. ಎರಡನೇಬಾರಿ ಅರಣ್ಯದೊಳಗೆ ಬಂದು ಕ್ರೂರಮೃಗಳಿಂದ ಹಿಂಸಿಸಲ್ಪಡುವುದು ನಡೆದಿದೆ. ಮೂರನೆಬಾರಿ ತಕ್ಕ ವ್ಯೂಹದಿಂದ ಬಂದಿರುವ ಗೋವುಗಳಪಾಲಕನು ತನ್ನ ಉದ್ದೇಶವನ್ನು ನೆರವೇರಿಸಿದ್ದಾನೆ. ಭೂಮಿಮೇಲೆ ತನ್ನ ಧರ್ಮಗಳನ್ನು ಪ್ರತಿಷ್ಟಿಸಿ, ಅಧರ್ಮಗಳನ್ನು ಇಲ್ಲದಂತೆ ಮಾಡಬೇಕೆಂದುಕೊಂಡ ಭಗವಂತನು ದ್ವಾಪರಯುಗದಲ್ಲಿ ಗೋಪಾಲನಾಗಿ ಬಂದಾಗ ಯಾರಿಗೂ ತಿಳಿಯದಂತೆ, ಯಾರೂ ಕೇಳದಂತೆ ರಹಸ್ಯವೆಂದು ಅರ್ಜುನನಿಗೆ ಒಂದುಬಾರಿ ಮಾತ್ರವೇ ಹೇಳಿ ನಂತರ ಯಾರಿಗೂ ಹೇಳದಂತೆ ಹೋಗಿದ್ದಾನೆ. ಮೊದಲು ಬಂದಂತೆ ಪೂರ್ತಿಯಾಗಿ ತಿಳಿದಿದೆ. ಆದರೆ ಎರಡನೆ ಬಾರಿ ಸಹ ಬಂದಂತೆ ಯಾರು ಒಪ್ಪಿಕೊಳ್ಳದೆಹೋದರು, ನಮಗೆ ಮಾತ್ರ

ತಿಳಿದಿದೆಂದುಕೊಳ್ಳುತ್ತೇವೆ. ಪಶುಗಳ ಕಾವಲುಗಾರ ಎರಡನೇಬಾರಿ ಬಂದು ಮೃಗಗಳ ಕೈಯಲ್ಲಿ ಹಿಂಸೆಗೆ ಗುರಿಯಾದಂತೆ, ಎರಡನೇಬಾರಿ ಬಂದವನು ಸಹ ಹಾಗೆಯೇ ಸ್ವಲ್ಪಕಾಲಕ್ಕೆ ಅಜ್ಞಾನಿಗಳ ಕೈಯಲ್ಲಿ, ಅಧರ್ಮವರರ ಕೈಯಲ್ಲಿ ಹಿಂಸೆಗೆ ಗುರಿಯಾದಂತೆ ಸ್ವಲ್ಪ ಅರ್ಥವಾಗಿದೆ. ಇನ್ನು ಮೂರನೇಬಾರಿ ಭಗವಂತನು ಹೊಸ ಪಥಕದಿಂದ ಭೂಮಿಮೇಲೆ ಬಂದು ಅಧರ್ಮಗಳನ್ನು ಇಲ್ಲದಂತೆ ಮಾಡಿ ಧರ್ಮಗಳಿಗೆ ಹಾನಿ ಇಲ್ಲದಂತೆ ಮಾಡುತ್ತಾನೆಂದು ಅಂದುಕೊಳ್ಳೋಣ. ಮೂರನೆಬಾರಿ ಬಂದಾಗ ಪಶುಗಳ ಕಾವಲಿಗಾರನಂತೆ ಅಜ್ಞಾನ ಮೃಗಗಳಿಂದ ತನ್ನನ್ನು ತಾನು ಕಾಪಾಡಿಕೊಳ್ಳುತ್ತಾ, ಅಧರ್ಮಗಳೆಂಬ ಹುಲ್ಲನ್ನು ತನ್ನ ಧರ್ಮಗಳಿಂದ ಇಲ್ಲದಂತೆ ಮಾಡುತ್ತಾನೆಂದು ಅಂದು ಕೊಳ್ಳುತ್ತಿದ್ದೇವೆ.

ದೇವರು ಭೂಮಿಮೇಲೆ ಅಧರ್ಮಗಳನ್ನು ಪೂರ್ತಿಯಾಗಿ ಇಲ್ಲದಂತೆ ಮಾಡುವುದಕ್ಕೆ ತ್ರೈತಸಿದ್ಧಾಂತದ ಪ್ರಕಾರ ಮೂರುಬಾರಿ ಬಂದು, ಆತನು ಸಹ ಈ ಲೋಕದಲ್ಲಿ ಎಷ್ಟೋ ಶ್ರಮಪಟ್ಟು, ತನ್ನ ಧರ್ಮಗಳನ್ನು ಆತನು ನೆಲೆಗೊಳಿಸಿ ಹೋಗಿದ್ದಾನೆ. ದೇವರು ಧರ್ಮಗಳನ್ನು ಮನುಷ್ಯರಿಗೆ ತಿಳಿಸುವುದಕ್ಕೆ ಎಷ್ಟೋ ಶ್ರಮಪಟ್ಟರೆ, ದೇವರನ್ನು ತಂದೆಯಾಗಿ ನಾವು ಭಾವಿಸಿದಾಗ ತಂದೆ ಕೆಲಸವನ್ನು ಕುಮಾರನು ಮಾಡದಂತೆ ಇರುತ್ತಾನಾ! ಕೆಲಸಗಳನ್ನು ಸೃಷ್ಟಿಸಿದ ನಮ್ಮ ತಂದೆಯಾದ ದೇವರ ಧರ್ಮಗಳನ್ನು ನಾವು ಪ್ರಚಾರ ಮಾಡುವುದು ನಮ್ಮ ಕರ್ತವ್ಯವಾಗಿ ಭಾವಿಸಬೇಕು. ಜವಾಬ್ದಾರಿ ಇರುವ ಮಗ ತಂದೆ ಕೆಲಸವನ್ನು ಮಾಡಿದಂತೆ ನಾನು ದೈವಧರ್ಮಗಳನ್ನು ಸಾಟಿ ಮನುಷ್ಯರಿಗೆ ತಿಳಿಸಬೇಕೆಂದು ಕೊಂಡಿದ್ದೇನೆ. ಅರಣ್ಯದೊಳಗೆ ಹೋಗಿ ಪಶುಗಳನ್ನು ಮೇಯಿಸುವುದು ಎಷ್ಟು ಕಷ್ಟವೋ, ಅಷ್ಟೇ ಕಷ್ಟವಾದ ಕೆಲಸಕ್ಕೆ ಸಜ್ಜಾಗಿದ್ದೇವೆ. ಇಲ್ಲಿಯವರೆಗೂ ಕೆಲವು ಧರ್ಮಗಳನ್ನು ತಿಳಿಸಿದ್ದೇವೆ. ಹಾಗೆ ತಿಳಿಸುವುದರಿಂದ ಮೃಗಗಳಂತೆ ಇರುವ ಕೆಲವರು ಅಜ್ಞಾನಗಳಿಂದ ತೊಂದರೆಯಾದರು, ಕೊನೆಗೆ ಏನಾದರೂ ದೇವರ ಮಾರ್ಗದಲ್ಲಿಯೆ ನಿಂತು ದೇವರ ಕೆಲಸವನ್ನೇ ಮಾಡಬೇಕೆಂದು ಕೊಳ್ಳುತ್ತಿದ್ದೇನೆ.

ಆದುದುರಿಂದ ಹೊರಗಿನ ಸಮಾಜದಲ್ಲಿ ಇನ್ನು ಉಳಿದಿರುವ ಅಧರ್ಮಗಳನ್ನು ಕುರಿತು ವಿವರಿಸಿಕೊಂಡು ನೋಡೋಣ.

ಭೂಮಿಮೇಲೆ ದಾನವನ್ನು ಯಾರು ಕೆಟ್ಟ ಕೆಲಸವಾಗಿ ಅಂದು ಕೊಳ್ಳುವುದಿಲ್ಲ. ದಾನ ಒಳ್ಳೆಯ ಕೆಲಸವಾಗಿ ಇದೆ. ದಾನ ಮಾಡಿದರೆ ಅದರ ಫಲಿತವಾಗಿ ಪುಣ್ಯ ಬರುತ್ತದೆ. ಆದರೆ ಮೋಕ್ಷ ಬರುವುದಿಲ್ಲ. ಆದ್ದರಿಂದ ದಾನವನ್ನು ಪ್ರಪಂಚ ಕಾರ್ಯದೊಳಗೆ ಸೇರಿಸಲಾಗಿದೆ. ದಾನವನ್ನು ಗೀತೆಯಲ್ಲಿ ದೇವರು ಅಧರ್ಮವಾಗಿ ಹೇಳಿದ್ದಾನೆ. ಯಜ್ಞಗಳನ್ನು ಆಚರಿಸದವರೂ, ವೇದಗಳನ್ನು ಪಠಿಸದವರೂ, ತಪಸ್ಸುಗಳನ್ನು ಮಾಡದವರೂ ಮನುಷ್ಯರಲ್ಲಿ ಸುಮಾರು ಶೇಕಡ 90 ರಷ್ಟು ಇರುತ್ತಾರೆ. ನಾವು ಜ್ಞಾನಿಗಳು, ಜ್ಞಾನವನ್ನು ಚೆನ್ನಾಗಿ ತಿಳಿದವರೆಂದುಕೊಂಡು ಅವರೆಲ್ಲರೂ ಯಜ್ಞಗಳನ್ನು, ವೇದಗಳನ್ನು, ತಪಸ್ಸುಗಳನ್ನು ಆಚರಿಸುತ್ತಿರುವಾಗ, ಅಂತಹ ಉನ್ನತ ಜ್ಞಾನವಿಲ್ಲದವರೆಲ್ಲರೂ ದಾನಗಳನ್ನು ಮಾಡುತ್ತಾ ಅದನ್ನೆ ಧರ್ಮವೆಂದುಕೊಳ್ಳುವುದು ನಡೆಯುತ್ತದೆ. ಯಜ್ಞ, ವೇದ, ತಪಸ್ಸುಗಳು ಇತರ ಮತಗಳಲ್ಲಿ ಇಲ್ಲದಿದ್ದರೂ ದಾನ ಮಾತ್ರ ಎಲ್ಲ ಮತಗಳಲ್ಲಿಯೂ ಹರಡಿದೆ. ಪ್ರತಿ ಮತದಲ್ಲಿಯೂ ಬಡವರಿಗೆ ದಾನ ಮಾಡುವುದು ಕರ್ತವ್ಯವಾಗಿ ಇಟ್ಟುಕೊಂಡಿದ್ದಾರೆ. ಹಿಂದೂ (ಇಂದೂ) ಮತದಲ್ಲಿ ಹೊರತು ಯಾವ ಮತದಲ್ಲಿಯೂ ದಾನವನ್ನು ಅಧರ್ಮವೆಂದು ಯಾರೂ ಹೇಳಲಿಲ್ಲ. ಅದು ಭಗವದ್ಗೀತೆಯಲ್ಲಿಯೇ ದಾನವನ್ನು ಅಧರ್ಮಗಳಲ್ಲಿ ನಾಲ್ಕನೆಯದಾಗಿ ಆಯ್ಕೆಮಾಡಿಕೊಂಡಿದ್ದಾರೆ. ಭಗವದ್ಗೀತೆಯಲ್ಲಿ ದಾನ ಅಧರ್ಮವೆಂದು ಹೇಳಿದರೂ ಆ ವಿಷಯವು ಯಾರಿಗೂ ತಿಳಿದಿಲ್ಲ. ಆದ್ದರಿಂದ ದೊಡ್ಡ ಸ್ವಾಮೀಜಿಗಳಿಂದ ಸಾಧಾರಣ ವ್ಯಕ್ತಿಯವರೆಗೂ ದಾನಗಳನ್ನು ಮಾಡುತ್ತಿದ್ದಾರೆ. ಕೆಲವರಾದರೆ ದಾನವನ್ನೇ ಧರ್ಮವಾಗಿ ಹೋಲಿಸಿಕೊಂಡು, ದಾನ ಮಾಡಿರಿ ಎಂಬ ಮಾತಿಗೆ ಬದುಲು ಧರ್ಮಮಾಡಿ ಎಂದು ಅನ್ನುತ್ತಿರುತ್ತಾರೆ. ದಾನ ಮಾಡುವುದರಿಂದ ಪುಣ್ಯ, ಪುಣ್ಯದಿಂದ ಸುಖಗಳು ಬರುತ್ತವೆಂದು ನಾನು ವಾಸ್ತವಜ್ಞಾನವನ್ನು ಹೇಳಿದರೆ, ಅದನ್ನು ಕೇಳದಂತೆ ಕೆಲವರು ದಾನ

ಮಾಡಿದರೆ ಮೋಕ್ಷ ಬರುತ್ತದೆಂದು ಹೇಳುತ್ತಿದ್ದಾರೆ. ದಾನ ಭಕ್ತಿಮಾರ್ಗದಲ್ಲಿ ಯಜ್ಞ, ವೇದ, ತಪಸ್ಸುಗಳಂತೆ ಆರಾಧನೆ ಮಾರ್ಗವೂ ಸಹ ಅಲ್ಲ. ಆದ್ದರಿಂದ ಅಷ್ಟೊ ಇಷ್ಟೊ ತಿಳಿದವರೆಲ್ಲರೂ ಯಜ್ಞ, ವೇದ, ತಪಸ್ಸುಗಳನ್ನು ಆರಿಸಿಕೊಂಡು, ಈ ಮೂರು ಆರಾಧನೆಗಳು ಮಾಡುವವರಿಗೆ ಉಳಿದವರು ದಾನ ಮಾಡಿರೆಂದು ಹೇಳಿದ್ದಾರೆ. ಯಜ್ಞ, ವೇದ, ತಪಸ್ಸುಗಳನ್ನು ಮಾಡುವವರು ಶೇಕಡ ಹತ್ತರಷ್ಟು ಜನರಿರುವಾಗ, ಉಳಿದ ಶೇಕಡ 90 ರಷ್ಟು ಜನರಿಗೂ ದಾನವನ್ನು ಆರೋಪಿಸಿದ್ದಾರೆ. ಬ್ರಹ್ಮಜ್ಞಾನ ತಿಳಿದವರು ಯಜ್ಞ ವೇದ, ತಪಸ್ಸುಗಳನ್ನು ಮಾಡುತ್ತಿರುತ್ತಾರೆ. ಅವರು ಬೇರೆ ಕೆಲಸವನ್ನು ಮಾಡಿ ಧನವನ್ನು ಸಂಪಾದಿಸಿದ್ದಾರೆ. ಆದುದರಿಂದ ಈ ಕೆಲಸಗಳನ್ನು ಮಾಡದ ಶೇಕಡ 90 ರಷ್ಟು ಜನರಾದ ಶೂದ್ರರು, ಬ್ರಾಹ್ಮಣರಿಗೆ ದಾನ ಮಾಡಬೇಕೆಂದು ಬೋಧಿಸಿದ್ದಾರೆ. ಹಾಗೆ ಪ್ರಚಾರವಾಗುವುದರಿಂದ ವೇದ, ಯಜ್ಞ, ತಪಸ್ಸುಗಳನ್ನು ಮಾಡುವ ಬ್ರಾಹ್ಮಣರಿಗೆ ಉಳಿದ ಶೂದ್ರರು ದಾನ ಮಾಡಬೇಕೆಂದು, ದಾನ ಮಾಡುವುದು ಶೂದ್ರರಿಗೆ ತಪ್ಪದೆ ಇರುವುದು ಎಂದು ಕೆಲವರು ಹೇಳುವುದು ನಡೆದಿದೆ.

ಅಧಿಕವಾಗಿ ಹಣ ಇರುವವರು ಸಮಾಜ ಸೇವೆಯೆಂದು ಅನೇಕ ವಿಧಗಳ ದಾನಗಳನ್ನು ಮಾಡುತ್ತಿದ್ದಾರೆ. ಯಜ್ಞಗಳು ಮಾಡುವವರು, ವೇದಗಳನ್ನು ಪಠಿಸುವವರು, ತಪಸ್ಸುಗಳು ಮಾಡುವವರು, ಆರ್ಥಿಕವಾಗಿ ಹಿಂದುಳಿದಿರುವಾಗ ಉಳಿದವರು ಬಹಳಜನರು ಆರ್ಥಿಕವಾಗಿ ಚೆನ್ನಾಗಿದ್ದು, ಸಮಾಜ ಸೇವೆ ಎಂಬ ಹೆಸರಿನಿಂದ ಅನೇಕ ವಿಧಗಳಾಗಿ ತನ್ನ ಹಣವನ್ನು ದಾನರೂಪದಲ್ಲಿ ಖರ್ಚು ಮಾಡುತ್ತಿದ್ದಾರೆ. ದಾನ ಎಂಬ ಹೆಸರಿನಿಂದ ಮಾಡುವ ಕೆಲಸ ಏನಾದರೂ ಅದು ಪುಣ್ಯವನ್ನು ತಂದಿಡುವುದೆ. ದಾನ ಮನುಷ್ಯನಿಗಿರುವ 12 ಗುಣಗಳಲ್ಲಿ ಒಂದಾಗಿದೆ. ಆಸೆ ಎಂಬ ಗುಣಕ್ಕೆ ವಿರುದ್ದ ಗುಣವಾಗಿರುವುದರಿಂದ ಆಸೆಗೆ ಪಾಪ ಬಂದರೆ, ದಾನಕ್ಕೆ ಪುಣ್ಯ ಬರುತ್ತದೆ. ದಾನ ಒಂದು ಗುಣವಾದ್ದರಿಂದ ಅದು ಧರ್ಮವು ಅಲ್ಲವೆಂದು ನಾವೂ ಸಹ ಹೇಳಬಹುದು. ಅಧರ್ಮಗಳಲ್ಲಿ ಕೊನೆಯದಾದ ದಾನವನ್ನು ಕುರಿತು ತಿಳಿದುಕೊಳ್ಳೋಣ. ಈಗ ಕೆಲವರು

ಒಂದು ಪ್ರಶ್ನೆ ಕೇಳಬಹುದು. ಕೆಲವರು ಧನಿಕರು ಸಮಾಜ ಸೇವೆಗಾಗಲಿ, ಇತರರಿಗಾಗಲಿ ದಾನವಾಗಿ ತಮ್ಮ ಹಣವನ್ನು ಕೊಡದಂತೆ, ತಿರುಪತಿ ವೆಂಕಟೇಶ್ವಸ್ವಾಮಿಗಾಗಲಿ, ಮತ್ತೆ ಯಾವ ಇತರೆ ದೇವತೆಗಳಿಗಾಗಲಿ ಹುಂಡಿಯಲ್ಲಿ ಕೆಲವು ಲಕ್ಷಗಳು ಹಾಕುತ್ತಿದ್ದಾರೆ. ಅದು ಮನುಷ್ಯರಿಗೆ ಅಲ್ಲದೆ ದೇವತೆಗಳಿಗೆ ಕೊಟ್ಟ ದಾನವಾಗುತ್ತದೆ ಅಲ್ಲವೆ! ಅಂತಹ ದಾನಕ್ಕೆ ಯಾವ ಫಲಿತವಿರುತ್ತದೆಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಹೀಗೆ ಇದೆ. ಹೊರಗೆ ಮನುಷ್ಯರಿಗೆ ಕೊಟ್ಟರೂ, ಗುಡಿಯಲ್ಲಿನ ದೇವರಿಗೆ ಕೊಟ್ಟರೂ ಅದು ದಾನವೇ ಆಗುತ್ತದೆ. ಅದರಿಂದ ಪುಣ್ಯವೇ ಬರುತ್ತದೆ. ದೇವಾಲಯಗಳಲ್ಲಿರುವವರು ದೇವತೆಗಳೇ ಆಗಲಿ ದೇವರು ಅಲ್ಲ. ಅದರಿಂದ ಜ್ಞಾನ ಬರುವುದಿಲ್ಲ. ಮೋಕ್ಷ ಬರುವುದಿಲ್ಲ. ನಾಲ್ಕು ಅಧರ್ಮಗಳಲ್ಲಿ ಮೂರು ಒಂದು ಗುಂಪಿಗೆ ಸಂಬಂಧಿಸಿರುವವಾಗಿದ್ದು, ದಾನ ಒಂದು ಮಾತ್ರ ಪಕ್ಕದಲ್ಲಿ ಒಂದಾಗಿದೆ. ಅಧರ್ಮದಲ್ಲಿನ ಒಂದು ಗುಂಪಾಗಿರುವ ಯಜ್ಞ, ವೇದ, ತಪಸ್ಸುಗಳನ್ನು ಹೆಚ್ಚಾಗಿ ಒಂದು ವರ್ಗದವರೆ ಆಚರಿಸಿದಾಗ ಪ್ರತ್ಯೇಕವಾಗಿರುವ ದಾನವನ್ನು ಎಲ್ಲ ವರ್ಗದವರು ಆಚರಿಸುತ್ತಿದ್ದಾರೆ.

ಇಲ್ಲಿಯವರೆಗೂ ಮೂರು ಧರ್ಮಗಳೆಂದು ಬಹಳಸಲ ಹೇಳಿ ಕೊಂಡರೂ, ಅವುಗಳ ವಿವರವು ತಿಳಿದಿಲ್ಲ. ಅವುಗಳ ವಿವರವನ್ನು ಈಗ ಹೇಳಿಕೊಳ್ಳೋಣ ಅಧರ್ಮಗಳಲ್ಲಿ ಮೂರು ಒಂದು ಭಾಗವಾಗಿ, ಒಂದು ಒಂದು ಭಾಗವಾಗಿ ಎಲ್ಲವೂ ಎರಡು ಭಾಗಗಳಾಗಿ ಇವೆಯೆಂದು ಹೇಳಿಕೊಂಡಿದ್ದೇವೆ. ಹಾಗೆಯೇ ಮೂರು ಧರ್ಮಗಳ ವಿಷಯಕ್ಕೆ ಬಂದರೆ ಮೊದಲ ಎರಡು ಒಂದು ಭಾಗವಾಗಿ, ಕೊನೆಯದೊಂದು ಒಂದು ಭಾಗವಾಗಿ ಒಟ್ಟು ಎರಡು ಭಾಗಗಳಿವೆಯೆಂದು ಹೇಳಬಹುದು. ಭಗವದ್ಗೀತೆಯನ್ನು ದೇವರು ಹೇಳಿದ ಧರ್ಮಗಳಲ್ಲಿ ಒಂದು ಕರ್ಮಯೋಗ, ಎರಡನೆಯದು ಬ್ರಹ್ಮಯೋಗ ಭಗವದ್ಗೀತೆಯಲ್ಲಿ ಮುಖ್ಯವಾಗಿ ಹೇಳಿರುವವು ಈ ಎರಡು ಧರ್ಮಗಳೆ, ಇವುಗಳಿಗಿಂತ ಭಿನ್ನವಾದದ್ದು ಮೂರನೆಯದು ಇದೆ. ಅದನ್ನು ಭಕ್ತಿಯೋಗ ಅನ್ನುತ್ತೇವೆ. ಭಗವದ್ಗೀತೆಯನ್ನು ಹಿಂಡಿ ನೋಡಿದರೆ ಮೊದಲು ಕಾಣಿಸುವವು

ಕರ್ಮಯೋಗ, ಬ್ರಹ್ಮಯೋಗ. ಈ ಎರಡು ಯೋಗಗಳು ಧರ್ಮಗಳಿಂದ ಕೂಡಿಕೊಂಡಿರುವವಾಗಿವೆ. ಇನ್ನು ಮೂರನೆಯದು ಭಕ್ತಿಯೋಗ ಎನ್ನುವುದು ಧರ್ಮಾತೀತವಾದುದೆಂದು ಹೇಳಬಹುದು. ಒಂದು ವಿಧವಾಗಿ ಹೇಳಬೇಕೆಂದರೆ ಕರ್ಮ, ಬ್ರಹ್ಮಯೋಗಗಳಿಗಿಂತ ಭಕ್ತಿಯೋಗವೆಂಬುವುದು ಕಷ್ಟವಾದುದೆಂದು ಹೇಳಬಹುದು. ಇಲ್ಲಿಯವರೆಗೂ ಧರ್ಮಗಳೆಂದು ಈಗ ಯೋಗಗಳೆಂದು ಹೇಳಿದ್ದಾರೆಂದುಕೊಳ್ಳಬೇಡಿ. ಧರ್ಮಗಳಿಂದ ಏರ್ಪಟ್ಟಿರುವವೇ ಯೋಗಗಳು. ಆದ್ದರಿಂದ ಯೋಗಗಳೆಂದರೂ, ಧರ್ಮಗಳೆಂದರೂ ಒಂದೇಯೆಂದು ಗ್ರಹಿಸ ಬೇಕು. ದೇವರ ಧರ್ಮಗಳಾದ ಮೂರು ಯೋಗಗಳನ್ನು ವಿವರವಾಗಿ ಹೇಳಿಕೊಳ್ಳೋಣ.

ಭೂಮಿಮೇಲಿರುವ ಯಾವ ಮನುಷ್ಯನಾದರೂ ದೇವರ ಹತ್ತಿರಕ್ಕೆ ಹೋಗಬೇಕೆಂದರೆ ಧರ್ಮಗಳೆನ್ನುವ ಈ ಮೂರುಮಾರ್ಗಗಳು ಹೊರತು ಇತರೆ ದಾರಿಯಿಲ್ಲ. ಮನುಷ್ಯ ಎನ್ನುವವನು ಯಾವ ಮತದಲ್ಲಿ ಇದ್ದರೂ, ಆ ಮತ ಗ್ರಂಥಗಳಲ್ಲಿಯೂ ಸಹ ಇವೇ ಧರ್ಮಗಳು ಹೇಳಲ್ಪಟ್ಟಿವೆ. ಇತರ ಮತದವರಿಗೆ ಅವರವರ ಗ್ರಂಥಗಳಲ್ಲಿನ ಜ್ಞಾನ ಪೂರ್ತಿಯಾಗಿ ಅರ್ಥವಾಗಲಿಲ್ಲ ವೆಂದು ಹೇಳಬಹುದು. ಇತರ ಮತಮೂಲಗ್ರಂಥಗಳನ್ನು ನಾನು ಓದಿ ನೋಡಿದಾಗ ಭಗವದ್ಗೀತೆಯಲ್ಲಿ ಹೇಳಿದ ಜ್ಞಾನಕ್ಕು ಆ ಗ್ರಂಥದಲ್ಲಿರುವ ಜ್ಞಾನಕ್ಕು ಎಲ್ಲಿಯಾದರೂ ಸ್ವಲ್ಪಮಾತ್ರವೂ ಸಹ ವ್ಯತ್ಯಾಸವಿಲ್ಲ. ಆದುದರಿಂದ ಯಾವ ಮತದವನಾದರೂ ದೇವರನ್ನು ತಿಳಿಯುವುದಕ್ಕೆ ಮೂರು ಧರ್ಮಗಳನ್ನು ತಿಳಿದಿರಬೇಕು. ಮನುಷ್ಯ ಮುಕ್ತಿಪಡೆಯಬೇಕೆಂದರೆ ಮೂರು ಧರ್ಮಗಳಲ್ಲಿ ಯಾವೊಂದು ಧರ್ಮವನ್ನು ಅನುಸರಿಸಿದರು ಅವನು ಮುಕ್ತಿ ಹೊಂದಿ ದೇವರ ಹತ್ತಿರಕ್ಕೆ ಸೇರುತ್ತಾನೆ. ಮುಕ್ತಿಯನ್ನು ಪಡೆಯುವುದಕ್ಕೆ ಮೂರು ಧರ್ಮಗಳನ್ನು ಅನುಸರಿಸಬೇಕಾದ ಕೆಲಸವಿಲ್ಲ. ಎಲ್ಲಾ ಮತಗಳಿಗೂ ಒಬ್ಬನೇ ದೇವರು, ಒಂದೇ ಧರ್ಮ ಎಂಬ ಪದ್ಧತಿ ಪ್ರಕಾರ ದೇವರ ಧರ್ಮಗಳು ಎಲ್ಲ ಮತಗಳಿಗೂ ಅನ್ವಯಿಸುವವಾಗಿವೆ. ಎಲ್ಲ ಮತದವರಿಗೂ ಶರೀರಗಳು ಒಂದೇ, ಅದರಲ್ಲಿನ

ಭಾಗಗಳು ಒಂದೇ. ಆ ಭಾಗಗಳಿಗೆ ಸಂಬಂಧಿಸಿದ ಕೆಲಸಗಳು ಒಂದೇ. ಹಾಗಿರುವಾಗ ದೇವರ ಧರ್ಮಗಳು ಶರೀರದಲ್ಲಿನ ಒಂದು ಭಾಗದಿಂದ ಸಂಬಂಧವಿದ್ದರೆ, ಅದು ಎಲ್ಲಾ ಮತದವರಿಗೂ ಒಂದೇ ವಿಧವಾಗಿ ಇರುತ್ತದೆ. ಕೆಲವು ಮತಗಳಲ್ಲಿ ಜ್ಞಾನವನ್ನು ಸ್ಥೂಲವಾಗಿ ಹೊರತು ಸೂಕ್ಷ್ಮವಾಗಿ ಅರ್ಥಮಾಡಿಕೊಳ್ಳುವ ಶಕ್ತಿಯಿಲ್ಲ. ಅಂತಹವರು ಅವರ ಮತಗ್ರಂಥದಲ್ಲಿ ದೇವರು ಹೇಳಿದ ಜ್ಞಾನಕ್ಕೆ ಬಹಳ ದೂರವಾಗಿರುತ್ತಾರೆ. ಅಂತಹವರಿಗೆ ದೇವರ ಜ್ಞಾನ ಅರ್ಥವಾಗದೆ, ನಮ್ಮ ಜ್ಞಾನ ಬೇರೆ ನಿಮ್ಮ ಜ್ಞಾನ ಬೇರೆ ಎಂದು ಹೇಳುತ್ತಿದ್ದಾರೆ. ದೇವರ ಜ್ಞಾನ ಎಲ್ಲಿಯಾದರೂ ಯಾವ ಮತದಲ್ಲಿಯಾದರೂ ಒಂದಾಗಿಯೇ ಇರುವಂತೆ ನಮಗೆ ಕಾಣಿಸುತ್ತಿರುವಾಗ ಅವರಿಗೆ ಅವಗಾಹನಾಶಕ್ತಿ ಇಲ್ಲದೆ ಬೇರೆಬೇರೆಯಾಗಿ ಕಾಣಿಸುತ್ತದೆ. ಭಗವದ್ಗೀತೆಯಲ್ಲಿನ ಜ್ಞಾನ ಸೃಷ್ಟಿ ಆದಿಯಲ್ಲಿಯೇ ದೇವರು ಸ್ವತಃವಾಗಿ ಹೇಳಿರುವುದು, ಆ ದಿನ ಯಾವ ಮತವು ಇಲ್ಲ. ಆದ್ದರಿಂದ ಮನುಷ್ಯರಿಗೆ ಅನ್ವಯಿಸುವ ಜ್ಞಾನವನ್ನು ದೇವರು ಹೇಳಿದ್ದಾನಾಗಲಿ, ಮತಗಳಿಗೆ ಅನ್ವಯಿಸುವ ಜ್ಞಾನವನ್ನು ಹೇಳಲಿಲ್ಲ.

ಕರ್ಮಯೋಗವೆಂದು ಹೆಸರು ಇಡಲಾಗಿರುವುದು ಒಂದು ಧರ್ಮವಾಗಿದ್ದು, ಬ್ರಹ್ಮಯೋಗವೆಂದು ಹೆಸರು ಇಡಲಾದ ಮತ್ತೊಂದು ಧರ್ಮ ಇದೆ. ಈ ಎರಡು ಧರ್ಮಗಳ ಮೂಲಕವೇ ದೇವರು ತಿಳಿಯಬೇಕು. ಈ ಎರಡು ಯೋಗಗಳನ್ನು ಹಿಂದೂ (ಇಂದೂ) ಧರ್ಮಗಳಾಗಿ ಭಗವದ್ಗೀತೆಯಲ್ಲಿ ಹೇಳಿದ್ದಾರೆ. ಆದರೆ ಇವುಗಳೇ ಇತರ ಮತಗಳಲ್ಲಿ ಇದ್ದರೂ ಅಲ್ಲಿ ಈ ಹೆಸರುಗಳು ಇಲ್ಲ. ಆದುದರಿಂದ ಅವು ಬೇರೆ ಆರಾಧನೆಗಳೆಂದು ಉಳಿದ ಮತದವರು ಅಂದುಕೊಳ್ಳುತ್ತಾರೆ. ಕೆಲವು ಮತಗಳಲ್ಲಿ ಕರ್ಮಯೋಗ ಹೆಚ್ಚಾಗಿ, ಬ್ರಹ್ಮಯೋಗ ಕಡಿಮೆಯಾಗಿ ಹೇಳಲಾಗಿದ್ದು, ಕೆಲವು ಮತಗಳಲ್ಲಿ ಕರ್ಮ, ಬ್ರಹ್ಮಯೋಗಗಳಿಗಿಂತ ಭಕ್ತಿಯೋಗ ಹೆಚ್ಚಾಗಿ ಹೇಳಲಾಗಿದೆ. ಒಂದು ಮತದಲ್ಲಿ ಕರ್ಮಯೋಗ, ಭಕ್ತಿಯೋಗ ಇರುವಾಗ ಬ್ರಹ್ಮಯೋಗವು ಸ್ವಲ್ಪವೂ ಇಲ್ಲ. ಈ ವಿಧವಾಗಿ ಗೀತೆಯಲ್ಲಿ ಹೇಳಿದ ಯೋಗಗಳನ್ನು ಮೂರು ಧರ್ಮಗಳು ಇತರ ಮತಗಳಲ್ಲಿ ಹೆಚ್ಚು

ಕಡಿಮೆಯಾಗಿ ಹೇಳಲಾಗಿವೆ ಎಂದು ತಿಳಿಯಬೇಕು. ಕೆಲವು ಮತಗಳಲ್ಲಿ ಒಂದೇ ಧರ್ಮವಿದ್ದು ಉಳಿದ ಎರಡು ಧರ್ಮಗಳು ಇಲ್ಲದಂತಿವೆ. ಒಂದೇ ಧರ್ಮದ ಮೂಲಕವಾದರು ಮೋಕ್ಷಹೊಂದಿ ದೇವರನ್ನು ಸೇರಬಹುದು. ಆದುದರಿಂದ ಅದೇನು ಕಡಿಮೆ ಮತವೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಭೂಮಿಯ ಮೇಲೆ ಎಷ್ಟು ಮತಗಳಿದ್ದರೂ ಅವುಗಳೆಲ್ಲವುದರಲ್ಲಿ ಒಂದಾಗಲಿ, ಎರಡಾಗಲಿ, ಮೂರಾಗಲಿ ಧರ್ಮಗಳಿವೆ. ಮೂರು ಧರ್ಮಗಳಿರುವ ಮತ ಬಹುಶಃ ಒಂದು ಹಿಂದೂ (ಇಂದೂ) ಮತವೆಂದೇ ಹೇಳಬಹುದು.

ಇಂದೂ (ಹಿಂದೂ) ಮತದಲ್ಲಿ ಹೆಚ್ಚಾಗಿ ಆಧ್ಯಾತ್ಮಿಕ ಇದೆಯೆಂದು ಹೇಳಬಹುದು. ಆಧ್ಯಾತ್ಮಿಕ ಎಂದರೆ ಆತ್ಮವನ್ನು ಅಧ್ಯಾಯನ ಮಾಡುವುದೆಂದು ಅರ್ಥ. ಆತ್ಮ ಶರೀರದಲ್ಲಿ ಇರುತ್ತದೆ. ಪ್ರಸ್ತುತ ಕಾಲದಲ್ಲಿ ಆತ್ಮವೆಂದರೆ ಏನೋ, ಆಧ್ಯಾತ್ಮಿಕ ಎಂದರೆ ಏನೋ ತಿಳಿಯದ ಸ್ಥಿತಿಯಲ್ಲಿ ಹಿಂದೂಗಳಿದ್ದಾರೆ. ಆತ್ಮವೆಂಬ ಮಾತು ಎಷ್ಟೋ ಸಂದರ್ಭಗಳಲ್ಲಿ ಬಳಸುತ್ತಿದ್ದರೂ ಅದರ ನಿಜ ಸ್ವರೂಪವನ್ನು ತಿಳಿಯದವರು ಆತ್ಮ ಎಂದರೆ ದೆವ್ವವೆಂದೊ, ಅಥವಾ ದೇವರೆಂದೊ ಅರ್ಥ ಮಾಡಿಕೊಳ್ಳುತ್ತಿದ್ದಾರೆ. ನಿಜಕ್ಕೆ ಆತ್ಮ ಎಂಬುದು ದೇವರೂ ಅಲ್ಲ. ದೆವ್ವವು ಅಲ್ಲ. ಶರೀರದಲ್ಲಿ ಮುಖ್ಯವಾದುದು ಆತ್ಮ, ಅದರ ನಂತರ ಜೀವಾತ್ಮ, ಅದರ ನಂತರ ಬುದ್ಧಿ, ಮನಸ್ಸು, ಚಿತ್ತ, ಅಹಮ್ ಎನ್ನುವವು ಇವೆ. ಮಾನವನ ಶರೀರದಲ್ಲಿ ಯಾವ ಮತದಲ್ಲಿದ್ದರೂ ಅದರಲ್ಲಿ ಒಟ್ಟು ಕೆಲಸ ಮಾಡುವ ಭಾಗಗಳು 26 ಇವೆ. ಆತ್ಮವನ್ನು ಹೊರತುಪಡಿಸಿ 25 ಭಾಗಗಳು ಇವೆ. ಭಗವದ್ಗೀತೆಯಲ್ಲಾಗಲಿ, ಇತರ ಮತಗ್ರಂಥಗಳಲ್ಲಾಗಲಿ ಹೇಳಿದ ಧರ್ಮಗಳನ್ನು ಆಚರಿಸುವುದಕ್ಕೆ ಶರೀರದಲ್ಲಿನ ಭಾಗಗಳನ್ನು ಪ್ರತಿ ಮನುಷ್ಯ ತಿಳಿದಿರಬೇಕು. ಮೇಲೆ ಹೇಳಿಕೊಂಡ ಆತ್ಮ, ಜೀವಾತ್ಮ, ಬುದ್ಧಿ, ಮನಸ್ಸು, ಚಿತ್ತ, ಅಹಮ್ ಕಣ್ಣಿಗೆ ಕಾಣಿಸುವವು ಅಲ್ಲ. ಅವು ಕಾಣಿಸದೆ ಶರೀರದಲ್ಲಿದ್ದು ಕೆಲಸ ಮಾಡುತ್ತವೆ. ದೇವರು ಹೇಳಿದ ಧರ್ಮಗಳಿಗೆ, ಶರೀರದಲ್ಲಿನ ಸೂಕ್ಷ್ಮವಾದ ಭಾಗಗಳಿಗೆ ಸಂಬಂಧವಿದೆ. ಒಬ್ಬ ವ್ಯಕ್ತಿ ಕರ್ಮಯೋಗ ಎಂಬ ಧರ್ಮವನ್ನು ಆಚರಿಸುವುದಕ್ಕೆ ಶರೀರದಲ್ಲಿ

ತಾನೊಂದು ಜೀವಿಯೆಂದು ಮೊದಲು ತಿಳಿದಿರಬೇಕು. ನಂತರ ತನ್ನೊಂದಿಗೆ ಶರೀರದಲ್ಲಿ ಮತ್ತೆ ಕೆಲವು ಭಾಗಗಳಿವೆಯೆಂದು ತಿಳಿಯಬೇಕು. ತನ್ನ ಶರೀರದಲ್ಲಿ ಯಾವ ಭಾಗವು ಯಾವ ಕೆಲಸವನ್ನು ಮಾಡುತ್ತಿದೆಯೆಂದು ಸಹ ತಿಳಿದಿರಬೇಕು. ಎಲ್ಲದಕ್ಕಿಂತ ಮುಖ್ಯವಾಗಿ ಶರೀರದಲ್ಲಿನ ಆತ್ಮಪಾತ್ರ ಏನೋ ತಿಳಿದಿರಬೇಕು.

ಶರೀರದಲ್ಲಿಯೇ ಮೂರು ಧರ್ಮಗಳು ಆಚರಣೆಗೆ ಬರುತ್ತಿವೆ. ಅದ್ದರಿಂದ ಶರೀರ ಭಾಗಗಳ ವಿಷಯವೆಲ್ಲವೂ ತಿಳಿಯದೆ ಹೋದರೆ ಧರ್ಮಾಚರಣೆಯೇ ತಿಳಿಯದಂತೆ ಹೋಗುತ್ತದೆ. ಶರೀರದಲ್ಲಿ ಏನು ನಡೆಯುತ್ತಿದೆಯೋ ತಿಳಿಯದವನು ಶರೀರದಿಂದ ಯಾವ ಯೋಗವನ್ನು ಮಾಡಲಾರನು. ಆದ್ದರಿಂದ ಯಾವ ಮನುಷ್ಯನಾದರೂ ತಾನು ಜ್ಞಾನಿ ಆಗಬೇಕೆಂದುಕೊಂಡರೆ ಮೊದಲು ಶರೀರಾಂತರ್ಗತ ಭಾಗಗಳನ್ನೂ, ಅವುಗಳ ಕಾರ್ಯಗಳನ್ನೂ ತಿಳಿಯಬೇಕು. ಹಾಗೆ ತಿಳಿಯದವನು ಯಾವ ಮತದಲ್ಲಿ ಇದ್ದರೂ ಆ ಮತ ಧರ್ಮವನ್ನು ಆಚರಿಸಲಾರನು, ದೇವರನ್ನು ತಿಳಿಯಲಾರನು. ಆದ್ದರಿಂದ ತಿಳಿದ ಹಿರಿಯರು ಪದ್ಯರೂಪದಲ್ಲಿ ಈ ವಿಧವಾಗಿ ಹೇಳಿದ್ದಾರೆ.

***ಪಂಚತತ್ತ್ವಗಳನ್ನು ಪಂಚೀಕರಿಸದೆ***
***ಒಳ್ಳೆಯ ಯತಿಗಳೆನ್ನುವ ಮಾತುಗಳಂದರೂ***
***ಕುಂಚದಲ್ಲಿ ಗಜವು ಮೊಟ್ಟೆ ಇಟ್ಟ ವಿಧವಾಗಿ***
***ಅಖಿಲ ಜೀವಸಂಗ ಆತ್ಮಲಿಂಗ.***

**ಭಾವಾರ್ಥ :** ಪಂಚಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಅವುಗಳಿಂದ ಹುಟ್ಟಿದ ಶರೀರವನ್ನು ಬೇರ್ಪಡಿಸಿ, ಅದರಲ್ಲಿ ಯಾವ ಯಾವ ಭಾಗಗಳು ಯಾವ ಯಾವ ಕೆಲಸವನ್ನು ಮಾಡುತ್ತಿವೆಯೋ ತಿಳಿಯದಂತೆ, ನಾನು ಚೆನ್ನಾಗಿ ತಿಳಿದ ಜ್ಞಾನಿಯೆಂದು ಅಂದುಕೊಂಡರೆ ಪುಟ್ಟಿ ಕೆಳಗೆ ಆನೆ ಮೊಟ್ಟೆ ಇಟ್ಟಿದೆಯೆಂದು ಹೇಳಿದಂತೆ ಇರುತ್ತದೆ. ಅಂದರೆ ಆನೆ ಪುಟ್ಟಿಕೆಳಗೆ ಮೊಟ್ಟೆ ಇಡುವುದು ಎಷ್ಟು ಅಸತ್ಯವೋ ತಾನು ಜ್ಞಾನಿ ಎಂದುಕೊಳ್ಳುವುದೂ ಸಹ ಅಷ್ಟೇ ಅಸತ್ಯವಾಗುತ್ತದೆ.

ಕಣ್ಣಿಗೆ ಕಾಣಿಸದ ಸೂಕ್ಷ್ಮವಾದ ದೇವರನ್ನು ತಿಳಿಯಬೇಕೆಂದರೆ ಮೊದಲು ಶರೀರದಲ್ಲಿರುವ ನೀನು ಸಹ ಸೂಕ್ಷ್ಮವಾಗಿಯೇ ಇದ್ದೇನೆಂದು ತಿಳಿದಿರಬೇಕು. ನಂತರ ಕಣ್ಣಿಗೆ ಕಾಣಿಸದ ಮನಸ್ಸನ್ನು ಕುರಿತು, ಬುದ್ಧಿಯನ್ನು ಕುರಿತು, ಅಹಮ್‌ನನ್ನು ಕುರಿತು ತಿಳಿದಿರಬೇಕು. ಕರ್ಮಯೋಗವನ್ನು ಆಚರಿಸಬೇಕೆಂದರೆ ಶರೀರದಲ್ಲಿನ ಅಹಮ್‌ನ ವೃತ್ತಾಂತವೆಲ್ಲವೂ ತಿಳಿದಿರಬೇಕು. ಅಹಮ್ ಶರೀರದಲ್ಲಿ ಎಲ್ಲಿದೆಯೋ, ಏನು ಮಾಡುತ್ತಿದೆಯೋ, ಯಾವ ಆಕಾರದಿಂದ ಇದೆಯೋ ಅದಕ್ಕೆ ಸಂಬಂಧಿಸಿದ ಸಮಾಚಾರವೆಲ್ಲವನ್ನೂ ತಿಳಿದಿರಬೇಕು. ಅಹಮ್‌ನ ಕುರಿತು ತಿಳಿಯದಿರುವಾಗ ಕರ್ಮಯೋಗವನ್ನು ಯಾರೂ ಆಚರಿಸಲಾರನು. ಅಹಮ್‌ನನ್ನು ಒಂದು ಪಕ್ಕದಲ್ಲಿ ತಿಳಿದು, ಮತ್ತೊಂದು ಪಕ್ಕದಲ್ಲಿ ಆತ್ಮವನ್ನು ತಿಳಿದವನು ಕರ್ಮಯೋಗವನ್ನು ಸುಲಭವಾಗಿ ಆಚರಿಸಬಹುದು. ಹಾಗೆಯೇ ಬ್ರಹ್ಮಯೋಗವನ್ನು  ಆಚರಿಸಬೇಕು ಎಂದರೆ ಶರೀರದಲ್ಲಿನ ಮನಸ್ಸಿನ ಸಮಾಚಾರವೆಲ್ಲವೂ ತಿಳಿದಿರಬೇಕು. ಮನಸ್ಸು ಶರೀರದಲ್ಲಿ ಎಲ್ಲಿದೆಯೋ, ಏನು ಮಾಡುತ್ತಿದೆಯೊ, ಯಾವ ಆಕಾರದಿಂದ ಇದೆಯೋ, ಒಟ್ಟಾರೆ ಅದರ ವೃತ್ತಾಂತವೆಲ್ಲವೂ ತಿಳಿದಿರಬೇಕು. ಮನಸ್ಸಿನ ಸಂಗತಿ ತಿಳಿಯದಿರುವಾಗ ಬ್ರಹ್ಮಯೋಗವನ್ನು ಯಾರೂ ಆಚರಿಸಲಾರನು. ಮನಸ್ಸನ್ನು ಮತ್ತು ಶರೀರದಲ್ಲಿನ ಆತ್ಮವನ್ನು ತಿಳಿದವನು ಬ್ರಹ್ಮಯೋಗವನ್ನು ಸುಲಭವಾಗಿ ಸಾಧಿಸಬಹುದು. ಕರ್ಮಯೋಗ ಮತ್ತು ಬ್ರಹ್ಮಯೋಗದ ಸಮಾಚಾರ ತಿಳಿದಿದೆ ಅಲ್ಲವೆ! ಈಗ ಧರ್ಮಾತೀತವಾದ ಭಕ್ತಿಯೋಗವನ್ನು ಕುರಿತು ಹೇಳಿಕೊಳ್ಳೋಣ.

ಭಕ್ತಿಯೋಗ ಒಂದು ವಿಧದಲ್ಲಿ ಕರ್ಮ, ಬ್ರಹ್ಮಯೋಗಗಳಿಗಿಂತ ದೊಡ್ಡದೆಂದೇ ಹೇಳಬಹುದು. ಏಕೆಂದರೆ ಕರ್ಮ, ಬ್ರಹ್ಮಯೋಗಗಳು ಎರಡು ಧರ್ಮಗಳಿಂದ ಕೂಡಿಕೊಂಡಿವೆ. ಕರ್ಮ, ಬ್ರಹ್ಮಯೋಗಗಳನ್ನು ಅತಿಕ್ರಮಿಸಿದ ಧರ್ಮವು ಭಕ್ತಿಯೋಗವೆಂದು ಹೇಳಬಹುದು. ಮೊದಲು ಕರ್ಮ, ಬ್ರಹ್ಮಯೋಗ ಧರ್ಮಗಳನ್ನು ತಿಳಿದು, ಅವುಗಳನ್ನು ಪರಿತ್ಯಜಿಸಿದ ನಂತರ ಬರುವುದು ಭಕ್ತಿಯೋಗ. ಮೊದಲು ಕರ್ಮ, ಬ್ರಹ್ಮ ಯೋಗಗಳು ತಿಳಿಯದೇ ಭಕ್ತಿಯೋಗ

ಅರ್ಥವಾಗುವುದಿಲ್ಲ. ಕರ್ಮ, ಬ್ರಹ್ಮಯೊಗಗಳಿಗಿಂತ ವೇಗವಾಗಿ ಭಕ್ತಿಯೋಗದಲ್ಲಿ ಮುಕ್ತಿಯನ್ನು ಸಾಧಿಸಬಹುದು. ಕರ್ಮಯೋಗವನ್ನು ಸಾಧಿಸುವುದಕ್ಕೆ ಅಹಮ್‌ನನ್ನು, ಬ್ರಹ್ಮಯೋಗವನ್ನು ಸಾಧಿಸುವುದಕ್ಕೆ ಮನಸ್ಸನ್ನೂ ತಿಳಿದಂತೆ, ಭಕ್ತಿಯೋಗವನ್ನು ಸಾಧಿಸುವುದಕ್ಕೆ ಶರೀರದಲ್ಲಿನ ಬುದ್ಧಿಯನ್ನು ಕುರಿತು ಪೂರ್ತಿಯಾಗಿ ತಿಳಿದಿರಬೇಕು. ಭಗವದ್ಗೀತೆಯಲ್ಲಿ ಹೇಳಲಾದ ಮೂರು ಧರ್ಮಗಳ ವಿಷಯವು ಹೇಳಿಕೊಳ್ಳುವುದಕ್ಕೆ ಬಹಳ ಸುಲಭವಾಗಿದೆ. ಆದರೆ ಆಚರಿಸುವುದಕ್ಕೆ ಬಹಳ ಕಷ್ಟವೆಂದೇ ಹೇಳಬಹುದು. ಏಕೆ ಕಷ್ಟವೆಂದರೆ ಒಂದೊಂದು ಯೋಗವನ್ನು ಆಚರಿಸುವುದಕ್ಕೆ ಶರೀರದಲ್ಲಿನ ಒಂದೊಂದು ಸೂಕ್ಷ್ಮವಾದ ಅವಯವವನ್ನು ಕುರಿತು ತಿಳಿದಿರಬೇಕು, ಹೊರಗೆ ಕಾಣಿಸುವ ಹತ್ತು ಇಂದ್ರಿಯಗಳನ್ನು ಸುಲಭವಾಗಿ ಹೇಳುವ ಮನುಷ್ಯ ತನ್ನ ಶರೀರದೊಳಗಿರುವ ಸೂಕ್ಷ್ಮ ಅಂತರಂಗಗಳಾದ ಮನಸ್ಸು, ಬುದ್ಧಿ, ಅಹಮ್‌ನನ್ನು, ಆತ್ಮವನ್ನು ತಿಳಿಯದಂತಿದ್ದಾನೆ. ಅವುಗಳನ್ನು ಕುರಿತು ತಿಳಿಯುವುದಕ್ಕೆ ಶರೀರಾಂತರ್ಗತ ಜ್ಞಾನವನ್ನು ತಿಳಿದಿರಬೇಕು. ಈ ಕಾಲದಲ್ಲಿ ಎಲ್ಲರೂ ಹೊರಗಿನ ಜ್ಞಾನ ಹೊಂದಿದ್ದಾರಾಗಲಿ, ಶರೀರದೊಳಗಿನ ಜ್ಞಾನವನ್ನು ಯಾರೂ ತಿಳಿಯದಂತಿದ್ದಾರೆ. ಆದ್ದರಿಂದ ಶರೀರದಲ್ಲಿನ ಅಂತರಂಗಗಳೊಂದಿಗೆ ಮುಡಿಹಾಕಲ್ಪಟ್ಟ ಯೋಗಗಳು ಎಲ್ಲರಿಗೂ ಕಷ್ಟವಾಗಿ ಬದಲಾಗಿವೆ.

ಈಗ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ ನೀವು ಶರೀರದಲ್ಲಿ ಮಾಡುವ ಮೂರು ಯೋಗಗಳನ್ನು ಧರ್ಮಗಳೆಂದು ಹೇಳಿದ್ದೀರಾ ನಂತರ ನಾಲ್ಕು ಅಧರ್ಮಗಳೆಂದು ಸಹ ಹೇಳಿದ್ದೀರಾ. ಆದರೆ ಇಲ್ಲಿ ಧರ್ಮವು ಅಲ್ಲದೆ, ಅಲ್ಲಿ ಅಧರ್ಮವು ಅಲ್ಲದೆ ನಾವು ಮಾಡುವ ಕೆಲಸಗಳು ಕೆಲವು ಇವೆ. ಅವುಗಳನ್ನು ಕುರಿತು ನೀವು ಏನನ್ನುತ್ತೀರಾ. ಉದಾಹರಣೆಗೆ ಒಬ್ಬ ವ್ಯಕ್ತಿ ಒಂದು ದೇವಾಲಯವನ್ನು ಕಟ್ಟಿಸಿದ್ದಾನೆ. ಆ ದೇವಾಲಯದಲ್ಲಿ ಪ್ರತಿ ದಿನ ನೂರುಜನ ದೇವರನ್ನು ದರ್ಶಿಸಿಕೊಂಡು ಪೂಜಿಸಿ ಹೋಗುತ್ತಿದ್ದಾರೆ. ಇಲ್ಲಿ ದೇವಾಲಯವನ್ನು ಕಟ್ಟಿಸಿದ ಮನುಷ್ಯನೊಬ್ಬನು, ಅದರಲ್ಲಿ ಮುಗಿಯುವವರು

ನೂರುಜನ ಇದ್ದಾರೆ ಅಲ್ಲವೆ! ಇವರಿಬ್ಬರೂ ದೇವರಿಗೆ ಸಂಬಂಧಿಸಿದ ಕಾರ್ಯವನ್ನೇ ಮಾಡುತ್ತಿದ್ದಾರೆ ತಾನೆ! ಈಗ ಇವರದು ಧರ್ಮವಲ್ಲ ಅನ್ನುತ್ತೇವಾ? ಅಧರ್ಮವೆನ್ನುತ್ತೇವಾ? ಎಂದು ಕೇಳಿದರು. ಅದಕ್ಕೆ ನಮ್ಮ ಉತ್ತರ ಹೀಗೆ ಇದೆ. ಇವರಿಬ್ಬರು ಮಾಡಿರುವುದು ದೈವಸಂಬಂಧವೆಂದು ಅಂದುಕೊಂಡರೂ ಈ ಎರಡು ಕಾರ್ಯಗಳು ಇಲ್ಲಿ ಧರ್ಮದಲ್ಲಾಗಲಿ ಅಲ್ಲಿ ಅಧರ್ಮದಲ್ಲಾಗಲಿ ಇಲ್ಲ. ಆದ್ದರಿಂದ ಈ ಎರಡು ಕೆಲಸಗಳನ್ನು ಧರ್ಮಗಳೆಂದಾಗಲಿ, ಅಧರ್ಮಗಳೆಂದಾಗಲಿ ಹೇಳಲಾರೆವು. ಆದರೆ ಧರ್ಮಗಳು ಅಧರ್ಮಗಳಾಗಲಿ ವಿಷಯಗಳೆಲ್ಲವನ್ನು ಒಳ್ಳೆಯಕೆಲಸಗಳೆಂದು ಕೆಲವನ್ನು, ಕೆಟ್ಟ ಕೆಲಸಗಳೆಂದು ಕೆಲವನ್ನು ಬಿಡಿಸಿ ಹೇಳಬಲ್ಲೆವು. ದೇವಾಲಯಗಳನ್ನು ಕಟ್ಟಿಸುವುದು ಮತ್ತು ಅಲ್ಲಿರುವ ದೇವರಿಗೆ ಮುಗಿಯುವುದು ಎರಡು ಒಳ್ಳೆಯ ಕೆಲಸಗಳ ಕೆಳಗೆ ಬರುತ್ತವೆ. ಒಳ್ಳೆಯ ಕೆಲಸಗಳಾದ್ದರಿಂದ ಅವುಗಳ ಫಲಿತವಾಗಿ ಪುಣ್ಯ ಬರುತ್ತದೆ. ಪುಣ್ಯಬರುವುದರಿಂದ ಅದನ್ನು ಅನುಭವಿಸುವುದಕ್ಕೆ ಪುನಃ ಹುಟ್ಟಬೇಕಾಗಿ ಬರುತ್ತದೆ.

ಅಧರ್ಮಗಳಾದ ಯಜ್ಞ, ವೇದ, ತಪಸ್ಸು, ದಾನಗಳನ್ನು ಮಾಡಿದಾಗ ಅವುಗಳಿಂದ ಪುಣ್ಯ ಬರುತ್ತದೆಂದು ಅಕ್ಷರಪರಬ್ರಹ್ಮ ಯೋಗದಲ್ಲಿ 28ನೇ ಶ್ಲೋಕದಲ್ಲಿ ಹೇಳಲಾಗಿದೆ. ಅಧರ್ಮಗಳಾದ ನಾಲ್ಕು ಕಾರ್ಯಗಳಿಂದ ಪುಣ್ಯ ಬರುತ್ತದೆ. ಹಾಗೆಯೇ ದೇವಾಲಯ ಕಟ್ಟುವುದು, ಮುಗಿಯುವುದರಿಂದ ಪುಣ್ಯವೆ ಬರುತ್ತಿದೆ. ಆದ್ದರಿಂದ ಎರಡು ವಿಧ ಕಾರ್ಯಗಳು ಒಂದೇ ಫಲಿತವನ್ನು ಕೊಡುತ್ತಿವೆ. ಪುಣ್ಯಬರುವ ಕಾರ್ಯಗಳಾದ ಅವುಗಳಿಂದ ದೇವರು ತಿಳಿಯುವುದಿಲ್ಲ ಆದ್ದರಿಂದ ಅವುಗಳನ್ನು ಸಹ ಅಧರ್ಮಗಳ ಕೆಳಗೆ ಜಮ ಮಾಡುತ್ತಿದ್ದೇವೆ. ದೇವರು ಹೇಳಿದ ನಾಲ್ಕು ಅಧರ್ಮಗಳ ಕಾರ್ಯಗಳೂ ಸಹ ಕೆಟ್ಟ ಕಾರ್ಯಗಳು ಯಾವುವು ಅಲ್ಲ ಅಲ್ಲವೆ! ಆದ್ದರಿಂದ ಅವುಗಳನ್ನು ಪುಣ್ಯಕಾರ್ಯಗಳೆಂದು ಹೇಳಬಹುದು. ಮುಖ್ಯವಾಗಿ ಹೇಳಿಕೊಂಡರೆ ಧರ್ಮಕಾರ್ಯಗಳೂ ಸಹ ಒಳ್ಳೆಯ ಕಾರ್ಯಗಳೆ ಆದರೂ, ಅವುಗಳಿಂದ

ಪುಣ್ಯ ಬರುವುದಿಲ್ಲ. ಧರ್ಮಕಾರ್ಯಗಳಿಂದ ಕರ್ಮಕ್ಕೆ ಅತೀತವಾದ ಮುಕ್ತಿ ಲಭಿಸುತ್ತದೆ. ಪ್ರಪಂಚದಲ್ಲಿನ ಒಳ್ಳೆಯ ಕೆಲಸದೊಳಗೆ ಅಧರ್ಮಕಾರ್ಯಗಳಾದ ನಾಲ್ಕು ಕೆಲಸಗಳು ಬೆರೆತುಹೋಗುತ್ತವೆ. ಆದರೆ ಧರ್ಮಕಾರ್ಯಗಳಾದ ಮೂರು ಯೋಗಗಳು ಎಂತಹ ಪ್ರಪಂಚ ಕೆಲಸಗಳಲ್ಲಿ ಬೆರೆತು ಹೋಗದಂತೆ, ಪ್ರತ್ಯೇಕವಾಗಿದ್ದು ಪ್ರತ್ಯೇಕವಾದ ಫಲಿತ ಕೊಡುತ್ತವೆ.

ಮನುಷ್ಯರು ತಮ್ಮ ಇಷ್ಟ ಬಂದಂತೆ ಪ್ರವರ್ತಿಸುತ್ತಾ ತಮ್ಮ ಪ್ರವರ್ತನೆ ಧರ್ಮಬದ್ಧ ವಾದುದೆಂದುಕೊಳ್ಳುವುದು ನಡೆಯುತ್ತದೆ. ಭೂಮಿಮೇಲೆ ಎಷ್ಟೋ ಮತಗಳು ಇವೆ. ಅವುಗಳ ಪ್ರತ್ಯೇಕತೆಗೋಸ್ಕರ, ಇದು ಇಂತಹ ಮತವೆಂದು ಇತರರು ತಿಳಿಯುವುದಕ್ಕೆ ಆಯಾ ಮತಗಳಿಗೆ ಕೆಲವು ಸಂಪ್ರದಾಯಗಳನ್ನು ಏರ್ಪಡಿಸಿಕೊಂಡಿರುತ್ತಾರೆ. ಅಂತಹ ಮತ ಸಂಪ್ರದಾಯಗಳನ್ನು ಧರ್ಮಗಳೆಂದು ಕೆಲವರಂದುಕೊಳ್ಳುವುದು ನಡೆಯುತ್ತದೆ. ಅವರ ಇಷ್ಟಬಂದಂತೆ ಪ್ರವರ್ತಿಸುತ್ತಾ ತಮ್ಮ ಪ್ರವರ್ತನೆ ಧರ್ಮಬದ್ದವಾದುದು ಎಂದುಕೊಳ್ಳುವುದು, ಮತ ಆಚಾರಗಳನ್ನು ಧರ್ಮಗಳೆಂದುಕೊಳ್ಳುವುದು, ಮತರಕ್ಷಕರನ್ನು ಧರ್ಮರಕ್ಷಕರೆಂದುಕೊಳ್ಳುವುದು, ದೊಡ್ಡ ತಪ್ಪು. ಧರ್ಮ ಒಂದು ಮತ ಸಂಪ್ರದಾಯಕ್ಕೆ ಸಂಬಧಿಸಿರುವುದಿಲ್ಲ. ಹಾಗೆಯೇ ಅವರವರ ಆಚರಣೆಗಳಿಗೆ ಸಂಬಂಧಿಸಿರುವುದಿಲ್ಲ. ಒಬ್ಬ ಸನ್ಯಾಸಿ ಕಾಷಾಯ ವಸ್ತ್ರಗಳನ್ನು ಧರಿಸುವುದು ಸಂಪ್ರದಾಯ ಆಗಬಹುದು, ಧರ್ಮವಲ್ಲ. ಧರ್ಮವು ಕಾಲಾನುಗುಣವಾಗಿ ಬದಲಾಗುವುದು ಕೂಡ ಅಲ್ಲ. ಧರ್ಮವನ್ನು ಮನುಷ್ಯರು ನಿರ್ಣಯಿಸಲಾರರು. ದೇವರು ಸೃಷ್ಟಿಸಿ ದೇವರೇ ತಿಳಿಸುವುದು ಧರ್ಮ. ಧರ್ಮ ದೇವರ ವಿಷಯದಲ್ಲಿಯೆ ಇರುತ್ತದೆ. ಪ್ರಪಂಚ ವಿಷಯಗಳಲ್ಲಿ ಇರುವುದಿಲ್ಲ. ಯಾವ ವಸ್ತುವಿಗಾದರೂ ಅದರ ಸ್ವಭಾವವು ಇರುತ್ತದೆ. ಆದರೆ ಅದನ್ನು ಧರ್ಮ ಎನ್ನಬಾರದು. ಒಂದು ದೇವರ ವಿಷಯದಲ್ಲಿಯೆ ಧರ್ಮ ಎಂಬ ಪದವನ್ನು ಬಳಸಿದರೆ ಧರ್ಮಕ್ಕೆ ಗುರುತಾಗಿ, ದೇವರಿಗೆ ಮರ್ಯಾದೆ ಇರುತ್ತದೆ.

ಕೆಲವರಾದರೆ ನಾವು ಧರ್ಮ ರಕ್ಷಕರೆಂದು ಹೇಳಿಕೊಳ್ಳುತ್ತಿರುತ್ತಾರೆ. ಮತ್ತೆ ಕೆಲವರಾದರೆ ಧರ್ಮಗಳನ್ನು ರಕ್ಷಿಸಿರಿ ಎಂದೂ ಸಹ ಹೇಳುತ್ತಿರುತ್ತಾರೆ. ಧರ್ಮಗಳೆಂದರೆ ಯಾವುವೊ ಇಲ್ಲಿಯವರೆಗೂ ತಿಳಿಯದಿರುವಾಗ, ಧರ್ಮ ಎಂದರೆ ಇಂತಹದೆಂದು ತಿಳಿಯದಿರುವಾಗ, ಯಾರಾದರೂ ಅದನ್ನು ಹೇಗೆ ರಕ್ಷಿಸುತ್ತಾರೆ. ಧರ್ಮಗಳನ್ನು ರಕ್ಷಿಸಿರಿ ಎಂದು ಹೇಳುವವರಿಗೆ ಇವು ಧರ್ಮಗಳೆಂದು ತಿಳಿಯದಿರುವಾಗ, ಅವುಗಳ ವಿಷಯ ಯಾವುದು ತಿಳಿಯದವನು ಹೇಗೆ ರಕ್ಷಿಸುತ್ತಾನೆ. ಭೂಮಿಮೇಲೆ ಮನುಷ್ಯರು ಧರ್ಮಗಳನ್ನು ರಕ್ಷಿಸುವ ಸಾಮರ್ಥ್ಯ ಹೊಂದಿದ್ದರೆ, ಧರ್ಮರಕ್ಷಣಾರ್ಥವು ನಾನು ಅವತರಿಸುತ್ತೇನೆಂದು ದೇವರು ಹೇಳಬೇಕಾದ ಕೆಲಸವಿಲ್ಲ, ಬರಬೇಕಾದ ಅವಶ್ಯಕತೆಯು ಇರುವುದಿಲ್ಲ. ದೇವರು ಮನುಷ್ಯನಾಗಿ ಬಂದು ಐದು ಸಾವಿರ ವರ್ಷಗಳ ಪೂರ್ವದಲ್ಲಿ ತನ್ನ ಧರ್ಮಗಳು ಇವು ಎಂದು ಹೇಳಿಹೋದರೆ, ಇಲ್ಲಿಯವರೆಗೂ ಆತನು ಹೇಳಿದ ಧರ್ಮಗಳನ್ನು ಅರ್ಥಮಾಡಿಕೊಳ್ಳದವರು "ನೆಲುವಿಗೆ ಹತ್ತಲಾಗದೆ ಸ್ವರ್ಗಕ್ಕೆ ಹತ್ತುತ್ತೇನೆನ್ನುವಂತೆ" (ನಿಲುವಿಗೆ ಹಾರೆಂದರೆ ಸ್ವರ್ಗಕ್ಕೆ ಹಾರುತ್ತೇನೆಂದಂತೆ) ಧರ್ಮಗಳನ್ನು ರಕ್ಷಿಸೆಂದು, ರಕ್ಷಿಸುತ್ತೇನೆಂದು ಹೇಳುವುದು ತಪ್ಪು ಅಲ್ಲವೆ! ದೇವರ ಧರ್ಮಗಳನ್ನು ದೇವರೆ ತಿಳಿಸಬೇಕೆ ಹೊರತು ಅವು ಯಾರಿಗೂ ತಿಳಿಯುವುದಿಲ್ಲ. ಆದ್ದರಿಂದ ದ್ವಾಪರಯುಗದಲ್ಲಿ ಆತನೇ ಬಂದು ಹೇಳಬೇಕಾದ ಕೆಲಸ ಏರ್ಪಟ್ಟಿದೆ.

ದೇವರಿಗೂ ಭಗವಂತನಿಗೂ ವ್ಯತ್ಯಾಸ ತಿಳಿಯದವರು, ತಪಸ್ಸಿಗೂ ಯೋಗಕ್ಕೂ ಬೇಧ ತಿಳಿಯದವರು, ಮತಕ್ಕೂ ಪಥಕ್ಕೂ ತಾರತಮ್ಯ ತಿಳಿಯದವರು, ಸಂಪ್ರದಾಯಕ್ಕೂ ಧರ್ಮಕ್ಕೂ ವ್ಯತ್ಯಾಸ ತಿಳಿಯದವರು, ಕುರುಡರಾಗಿ ಅಜ್ಞಾನ ಯಾವುದೊ ಆಧ್ಯಾತ್ಮಿಕ ಯಾವುದೊ ತಿಳಿಯದೆ ದೇವರ ವಿಷಯದಲ್ಲಿ ಇಷ್ಟಬಂದಂತೆ ಪ್ರವರ್ತಿಸುತ್ತಿದ್ದಾರೆ. ತಮ್ಮ ಪ್ರವರ್ತನೆ ಅಜ್ಞಾನ ಭೂಯಿಷ್ಟ ವಾದುದೆಂದು ತಿಳಿಯದೆ ಧರ್ಮದಿಂದ ಆವರಿಸುವವರನ್ನು ಅಜ್ಞಾನಿಗಳಾಗಿ ಭಾವಿಸಿಕೊಂಡು ತಮ್ಮನ್ನು ತಾವು ದೊಡ್ಡ ಜ್ಞಾನಿಗಳಾಗಿ ಅಂದುಕೊಳ್ಳುತ್ತಿದ್ದಾರೆ. ಹಾಗೆ ಅಂದುಕೊಳ್ಳುವುದರಿಂದ ತಮಗೆ ತಿಳಿಯದಿರುವುದು ತಿಳಿದುಕೊಳ್ಳಬೇ

ಕೆಂದು ಯಾರೂ ಅಂದುಕೊಳ್ಳುವುದಿಲ್ಲ. ತಿಳಿಯದಿರುವುದು ತಿಳಿದುಕೊಳ್ಳಬೇಕೆಂಬ ಭಾವವು ಬರದಿರುವುದರಿಂದ, ಕಾಲ ಕಳೆದಂತೆಲ್ಲಾ ಮನುಷ್ಯರಿಗೆ ದೈವ ಜ್ಞಾನ ತಿಳಿಯದಂತೆ ಹೋಗುತ್ತದೆ. ದೈವಜ್ಞಾನ ತಿಳಿಯದಂತೆ ಹೋದಾಗ ದೈವ ಧರ್ಮಗಳೆಂದರೆ ಏನೋ ಪೂರ್ತಿಯಾಗಿ ತಿಳಿಯದಂತೆ ಹೋಗುತ್ತವೆ. ಅಂತಹದರಲ್ಲಿ ಮನುಷ್ಯನ ತಲೆಯಲ್ಲಿನ ಗುಣ ಪ್ರಭಾವ (ಮಾಯ ಪ್ರಭಾವ) ದಿಂದ ತಿಳಿಯಲ್ಪಟ್ಟಿರುವವೆ ಧರ್ಮಗಳೆಂದುಕೊಂಡು ಅಧರ್ಮಗಳನ್ನು ಆಚರಿಸುವವರು. ಕೆಲವರಾದರೆ ಅಧರ್ಮಗಳಾದ ಯಜ್ಞ, ವೇದ, ತಪಸ್ಸು, ದಾನಗಳನ್ನು ಸಹ ಆಚರಿಸುವುದಕ್ಕೆ ಅವುಗಳಿಗೆ ಅನುಬಂಧವಾಗಿರುವ ಕೆಲಸಗಳನ್ನು ಮಾಡುತ್ತಿದ್ದಾರೆ. ದೇವರು ಹೇಳಿದ ಧರ್ಮಗಳನ್ನು ಆಚರಿಸುವವರೆ ದೇವರಿಗೆ ಇಷ್ಟವಾದವರಾದಾಗ, ಅಧರ್ಮಗಳನ್ನು ಮತ್ತು ಅವುಗಳಿಗೆ ಅನುಬಂಧ ಕಾರ್ಯಗಳನ್ನು ಮಾಡುವವರು ದೇವರಿಗೆ ಅಯಿಷ್ಟರಾಗಿ ಉಳಿದು ಹೋಗುತ್ತಿದ್ದಾರೆ. ದೇವರಿಗೆ ಅಯಿಷ್ಟರಾಗಿರುವವರನ್ನು ದೇವರು ಏನೂ ಅನ್ನುವುದಿಲ್ಲ. ಆದರೆ ಈಕಡೆ ದೇವರೂ ಅಲ್ಲದೆ, ಆಕಡೆ ಮನುಷ್ಯರಲ್ಲದವರು ಮಾತ್ರ ದೇವರಿಗೆ ಅಯಿಷ್ಟಗಳಾದ ಅಧರ್ಮಗಳ ಮೇಲೆ ಹೆಚ್ಚಿನ ಕೋಪ ಹೊಂದಿರುತ್ತಾರೆ. ಪಕ್ಕದಲ್ಲಿ ಬರ್ಚಿಯಂತೆ ಇರುವವರು ತಮ್ಮ ಕೋಪವನ್ನು ಅವಕಾಶ ಬಂದಾಗ ಅಜ್ಞಾನಿಗಳಾದ ಅಧರ್ಮವರರ ಮೇಲೆ ತೋರಿಸುತ್ತಾರೆ. ಅದು ಮನುಷ್ಯರಿಗೆ ದೊಡ್ಡ ಶಿಕ್ಷೆಯಾಗುತ್ತದೆ. ಕಾಣಿಸದಂತೆ ಇದ್ದು ಅವಕಾಶ ಬಂದಾಗ ಸಮಯ ನೋಡಿ ಶಿಕ್ಷಿಸುವವರು ಯಾರು ಎಂದು ಯಾರಾದರೂ ಪ್ರಶ್ನಿಸಿದರೆ ಉತ್ತರ ಹೀಗೆ ಇದೆ.

ಪ್ರಭುವಿಗೂ ಪ್ರಜೆಗಳಿಗೂ ಮಧ್ಯದಲ್ಲಿ ಪ್ರಭುತ್ವ ಹೇಗಿದೆಯೋ, ಹಾಗೆಯೇ ದೇವರಿಗೂ ಮನುಷ್ಯರಿಗೂ ಮಧ್ಯದಲ್ಲಿ ದೈವತ್ವ ಎನ್ನುವುದು ಇದೆ. ಪ್ರಭುವಿಗೂ ಪ್ರಜೆಗಳಿಗೂ ಮಧ್ಯದಲ್ಲಿರುವ ಪ್ರಭುತ್ವ ಪ್ರಜೆಗಳನ್ನು ಪಾಲಿಸುವುದಾಗಿ ಇದೆ. ಪ್ರಜೆಗಳನ್ನು ಪಾಲಿಸುವ ಅಧಿಕಾರ ಪ್ರಭುವಿನಿಂದ ಪಡೆದಿರುವುದು ಪ್ರಭುತ್ವ. ಹಾಗೆಯೆ ದೇವರಿಗೂ ಮನುಷ್ಯರಿಗೂ ಮಧ್ಯದಲ್ಲಿರುವ ದೈವತ್ವವು ಮನುಷ್ಯರನ್ನು

ನಡೆಸುವುದಾಗಿದೆ. ಮನುಷ್ಯರನ್ನು ನಡೆಸುವ ಅಧಿಕಾರ ದೇವರಿಂದ ಹೊಂದಿರುವುದು ದೈವತ್ವ. ಹೊರಗೆ ಕಾಣಿಸುವುದು ಪ್ರಭುತ್ವವಾದರೆ, ಕಾಣಿಸದಿರುವುದು ದೈವತ್ವ ಇದೆ. ಪ್ರಜೆಗಳನ್ನು ಪಾಲಿಸುವ ಪ್ರಭುತ್ವದಲ್ಲಿ ಭಾಗವಾಗಿ ಪೋಲೀಸ್ ಡಿಪಾರ್ಟ್‌ಮೆಂಟ್, ರೆವಿನ್ಯೂ ಡಿಪಾರ್ಟ್‌ಮೆಂಟ್ ಮೊದಲಾದ ಡಿಪಾರ್ಟ್‌ಮೆಂಟ್‌ಗಳು ಇರುವಂತೆ, ಮನುಷ್ಯರನ್ನು ನಡೆಸುವ ದೈವತ್ವದಲ್ಲಿ ಭಾಗವಾಗಿ ಉಪಗ್ರಹಗಳು ಮೊದಲುಗೊಂಡು ಗ್ರಹಗಳವರೆಗೂ, ಉಪಭೂತಗಳು, ಭೂತಗಳು ಮೊದಲುಗೊಂಡು ಮಹಾಭೂತಗಳವರೆಗೂ ಇವೆ.

ವಿಶ್ವದಲ್ಲಿ ಜೀವರಾಶಿಗಳಿಗೂ ದೇವರಿಗೂ ಮಧ್ಯದಲ್ಲಿ ಗ್ರಹಜಾತಿಗಳು, ಭೂತಜಾತಿಗಳು ಎಷ್ಟೋ ಕೋಟಿಗಳ ಸಂಖ್ಯೆಯಲ್ಲಿವೆ. ಅವುಗಳಲ್ಲಿ ಸ್ಥೂಲ ಶರೀರ ಇರುವವು, ಸ್ಥೂಲ ಶರೀರ ಇಲ್ಲದಿರುವವು ಎರಡು ವಿಧಗಳು ಇವೆ. ಸ್ವಲ್ಪಹೊತ್ತು ಆಕಾರವಿದ್ದು ಸ್ವಲ್ಪಹೊತ್ತು ಆಕಾರ ಇಲ್ಲದಿರುವವು ಇವೆ. ಕೆಲವು ಗ್ರಹಗಳು, ಕೆಲವು ಭೂತಗಳು ಸ್ವಲ್ಪಹೊತ್ತು ಆಕಾರದಿಂದ, ಸ್ವಲ್ಪಹೊತ್ತು ಆಕಾರ ಇಲ್ಲದಂತಿರುವ ಎರಡು ವಿಧಗಳು ಇರುವವು ಎಷ್ಟೋ ಇವೆ. ಇವುಗಳ ವಿಷಯ ಯಾರಿಗೂ ಇಲ್ಲಿಯವರೆಗೂ ತಿಳಿದಿಲ್ಲವೆಂದೇ ಹೇಳುತ್ತಿದ್ದೇವೆ. ಇವೆಲ್ಲವೂ ದೇವರ ನಂತರ ಸ್ಥಾನದಲ್ಲಿರುವ ಪ್ರಕೃತಿ ಅಧೀನದಲ್ಲಿ ಇವೆ. ದೇವರು ಕೆಲಸಮಾಡುವುದಿಲ್ಲ, ವಿಶ್ವವೆಲ್ಲವನ್ನೂ ಕೆಲಸ ಮಾಡಿಸಿ ಸಾಗಿಸುವುದು ಪ್ರಕೃತಿ. ಪ್ರಕೃತಿ ದೇವರ ನಂತರ ಎರಡನೇ ಶಕ್ತಿಯಾಗಿದೆ. ಭಗವದ್ಗೀತೆ ಗುಣತ್ರಯ ವಿಭಾಗಯೋಗವೆಂಬ ಅಧ್ಯಾಯದಲ್ಲಿ 3, 4ನೇ ಶ್ಲೋಕಗಳಲ್ಲಿ ಪ್ರಕೃತಿಯನ್ನು ತನ್ನ ಪತ್ನಿಯಾಗಿ ದೇವರು ನೇಮಕ ಮಾಡಿಕೊಂಡಿದ್ದಾನೆ.

***ಶ್ಲೋಕ 3. ಮಮಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।***
***ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ! ॥***

***ಶ್ಲೋಕ 4. ಸರ್ವಯೋನಿಷು ಕೌಂತೇಯ! ಮೂರ್ತಯಃ ಸಂಭವಂತಿ ಯಾಃ ।***
***ತಾಸಾಂ ಬ್ರಹ್ಮ ಮಹದ್ಯೋನಿಃ ಅಹಂ ಬೀಜಪ್ರದಃ ಪಿತಾ ॥***

**ಭಾವಾರ್ಥ :–** ಪ್ರಕೃತಿಯೆಲ್ಲವೂ ನನಗೆ ಸತಿಯಾಗಿದ್ದು ನನ್ನಿಂದ ಗರ್ಭಧರಿಸುತ್ತಿದೆ. ಸರ್ವಭೂತಗಳು ಪ್ರಕೃತಿ ಗರ್ಭದಿಂದ ಹುಟ್ಟುತ್ತಿವೆ.

ಸರ್ವಯೋನಿಗಳಲ್ಲಿ ಹುಟ್ಟುತ್ತಿರುವ ಅನೇಕ ಆಕೃತಿಗಳು ಹೊಂದಿರುವ ಸರ್ವಜೀವರಾಶಿಗಳಿಗೂ ತಾಯಿ ಪ್ರಕೃತಿ ಆಗಿದ್ದು, ಅವುಗಳಿಗೆ ಬೀಜ ಪ್ರಧಾತನಾದ ನಾನು (ಪರಮಾತ್ಮ) ತಂದೆ ಆಗುತ್ತಿದ್ದೇನೆ.

ಮಕ್ಕಳನ್ನು ಸಾಕುವುದು ತಾಯಿಯೇ ಅಲ್ಲವೆ! ಅದೇ ವಿಧವಾಗಿ ಸರ್ವ ಜೀವರಾಶಿಗಳನ್ನು ನಿತ್ಯವು ಅನೇಕ ವಿಧಗಳಾಗಿ ಕೆಲಸ ಮಾಡಿಸಿ ಜೀವನಗಳನ್ನು ಸಾಗಿಸುವಂತೆ ಪ್ರಕೃತಿಯೇ ಮಾಡುತ್ತದೆ. ವಿಶ್ವವ್ಯಾಪ್ತವಾಗಿ ಪ್ರಕೃತಿ ಎಲ್ಲದಕ್ಕೂ ಹಿಂದೆ ಇದ್ದು ನಡೆಸುತ್ತಿದೆ. ಮೇಲಿನ ಶ್ಲೋಕದಲ್ಲಿ ಎಲ್ಲರಿಗೂ ಮಾತೆ ತಾಯಿಯೆಂದು, ಎಲ್ಲರಿಗೂ ತಂದೆ ಪರಮಾತ್ಮ ಎಂದು ತಿಳಿದುಹೋಗಿದೆ. ಪ್ರಕೃತಿ ಒಂದಾಗಿಲ್ಲ. ಪ್ರಕೃತಿ ಮುಖ್ಯವಾಗಿ ಐದು ಭಾಗಗಳಾಗಿ ಇದ್ದು, ಅದರಿಂದ ಹುಟ್ಟಿದ ಎಷ್ಟೋಶಕ್ತಿಗಳನ್ನು ತನ್ನ ಕೆಲಸಕ್ಕೋಸ್ಕರ ಬಳಸಿಕೊಳ್ಳುತ್ತಿದೆ. ಒಂದು ಗೃಹದಲ್ಲಿ ಕೆಲವರು ಕುಟುಂಬ ಸದಸ್ಯರು ಇರುವಾಗ, ಕೆಲವರು ಕೆಲಸದವರು ಇರುವಂತೆ, ವಿಶ್ವವನ್ನು ಪ್ರಕೃತಿ ಪರಮಾತ್ಮ ಗೃಹದಲ್ಲಿ ಸರ್ವಜೀವರಾಶಿಗಳಿಗೂ ಕುಟುಂಬ ಸದಸ್ಯರಾಗಿ ಗ್ರಹಗಳು, ಭೂತಗಳು ಎಷ್ಟೋ ಇವೆ. ಒಂದು ಮನೆಯಲ್ಲಿ ಕೆಲವರು ಕೆಲಸದವರು ಕೆಲಸ ಮಾಡುತ್ತಿರುವಾಗ, ಕುಟುಂಬ ಸದಸ್ಯರೆಲ್ಲರೂ ಜೀವನವನ್ನು ಸಾಗಿಸುತ್ತಿದ್ದಾರೆ. ಈ ವಿಧವಾಗಿ ಜೀವರಾಶಿಗಳೆಲ್ಲವೂ ಪಾಲಿಸಲ್ಪಡುವವೆ ಎಂದು, ಪ್ರಕೃತಿ ಮತ್ತು ಪ್ರಕೃತಿಯಲ್ಲಿನ ಶಕ್ತಿಗಳೆಲ್ಲವೂ ಪಾಲಿಸುವವೆಂದು ತಿಳಿಯುತ್ತದೆ. ದೇವರಿಗೂ, ಮನುಷ್ಯರಿಗೂ ಮಧ್ಯದಲ್ಲಿರುವ ಗ್ರಹ, ಭೂತಗಳಿದ್ದು ಅಧರ್ಮಗಳನ್ನು ಆಚರಿಸುವವರ ಮೇಲೆ ದೇವರಿಗೆ ಅಯಿಷ್ಟರಾದವರ ಮೇಲೆ, ದೇವರನ್ನು ನಿಂದಿಸುವವರ ಮೇಲೆ, ದೇವರ ಜ್ಞಾನವನ್ನು ಪ್ರಚಾರ ಮಾಡುವವರಿಗೆ ನಷ್ಟ ಕಷ್ಟವನ್ನು ಕೊಡುವವರ ಮೇಲೆ ಕೋಪ ದೃಷ್ಟಿ ಹೊಂದಿರುತ್ತಾರೆ. ಅವಕಾಶ ಬಂದಾಗ ಅಂತಹವರನ್ನು ಹಿಂಸಿಸದೆ ಬಿಡುವುದಿಲ್ಲ.

ಒಂದು ಭೂಕಂಪ ಬಂದಿದೆ ಎಂದರೆ ಅದರ ಹಿಂದೆ ಭೂಮಿ ಎಂಬ ಭೂತವೊಂದರ ಸ್ವಲ್ಪ ಶಕ್ತಿ ಕೆಲಸ ಮಾಡಿದೆಯೆಂದು ಅರ್ಥವಾಗುತ್ತದೆ. ಹಾಗೆಯೇ ಒಂದು ಸುನಾಮಿ ಬಂದಿದೆ ಎಂದರೆ ನೀರು ಎಂಬ ಭೂತವೊಂದರ ಶಕ್ತಿ ಕೆಲಸ ಮಾಡಿದೆಯೆಂದು ತಿಳಿಯುತ್ತದೆ. ಭೂಕಂಪ ಬಂದರೂ, ಸುನಾಮಿ ಬಂದರೂ ನಷ್ಟ ಹೋಗುವುದು, ಪ್ರಾಣಗಳು ಕಳೆದುಕೊಳ್ಳುವುದು, ತಾಯಿಗೂ ಮಕ್ಕಳಿಗೂ, ತಂದೆಗೂ ಮಕ್ಕಳಿಗೂ ಸುಳಿವು ತಿಳಿಯದಂತಾಗಿ ಸತ್ತುಹೋಗುವುದು, ಅನಾಥರಾಗುವುದು ಮೊದಲಾದ ಚಿತ್ರಹಿಂಸೆಗಳ ಪಾಲಾಗುವುದು ಮಾನವರು ಮತ್ತು ಕೆಲವು ಜೀವರಾಶಿಗಳು. ಹಾಗೆ ಮನುಷ್ಯರು ಅಷ್ಟು ಘೋರವಾಗಿ ದುಃಖಪಡುವುದು, ಸತ್ತು ಹೋಗುವುದು ದೇವರಿಗೆ ತಿಳಿಯದಂತೆ ನಡೆಯುತ್ತಿದೆಯಾ? ಎಂದರೆ ದೇವರಿಗೆ ಎಲ್ಲ ತಿಳಿದೇ ನಡೆಯುತ್ತಿವೆ ಎಂದು ತಿಳಿಯುತ್ತಿದೆ. ದೇವರಿಗೆ ತಿಳಿಯದಂತೆ ಯಾರ ತಲೆಯಲ್ಲಿನ ಕೂದಲು ಸಹ ಉದುರಿ ಕೆಳಗೆ ಬೀಳುವುದಿಲ್ಲ. ಅಂತಹದರಲ್ಲಿ ಅಷ್ಟು ಭಯಂಕರವಾದ ಸಂಘಟನೆಗಳು ದೇವರಿಗೆ ತಿಳಿದೇ ನಡೆಯುತ್ತಿರುತ್ತದೆ. ಭೂಮಿಮೇಲೆ ಮನುಷ್ಯ ಎಷ್ಟೋ ವಿಧಗಳ ಪಾಪಗಳನ್ನು ಸಂಪಾದಿಸಿಕೊಳ್ಳುತ್ತಿದ್ದಾನೆ. ದೈವಿಕವಾಗಿ ಧರ್ಮಗಳನ್ನು ಬೋಧಿಸುವವರನ್ನು, ಆಚರಿಸುವವರನ್ನು ಹಿಂಸಿಸುತ್ತಿದ್ದಾನೆ. ಇನ್ನು ಎಷ್ಟೋ ದೇವರಿಗೆ ವಿರುದ್ಧವಾದ ಕೆಲಸಗಳನ್ನು ಇಷ್ಟವಿಲ್ಲದ ಕೆಲಸಗಳನ್ನು ಮಾಡುತ್ತಿದ್ದಾನೆ. ಆ ವಿಧವಾಗಿ ಮಾಡಿದವರಿಗೆ ಪಾಪ ಎಷ್ಟು ಬಂದಿರುವುದು ಲೆಕ್ಕಿಸಲ್ಪಟ್ಟಿರುತ್ತದೆ. ಮಾಡಿಕೊಂಡ ಪಾಪಕ್ಕೆ ತಕ್ಕಂತೆ ಮನುಷ್ಯ ದೇವರ ಪರಿಪಾಲನೆಯಲ್ಲಿ ಗ್ರಹಗಳಿಂದ, ಭೂತಗಳಿಂದ, ಭೂಮಿ ಮೇಲೆಯೆ ಹಿಂಸಿಸಲ್ಪಡುತ್ತಿದ್ದಾನೆ. ಮನುಷ್ಯ ತನ್ನ ಪಾಪವನ್ನು ಎಲ್ಲಿಯೋ ನರಕದಲ್ಲಿ ಅನುಭವಿಸುತ್ತಾನೆಂದುಕೊಳ್ಳುವುದು ತಪ್ಪು. ಅನುಭವಿಸುವ ಪಾಪಗಳೆಲ್ಲಾ ಹಾಗೆಯೇ ಪುಣ್ಯಗಳೆಲ್ಲಾ ಭೂಮಿಮೇಲೆಯೇ ಮನುಷ್ಯ ಸುಖ, ದುಃಖಗಳಾಗಿ ಅನುಭವಿಸುತ್ತಿದ್ದಾನೆ. ಈದಿನ ಭೂಮಿಮೇಲೆಯೇ ಸಂಭವಿಸುವ ಎಷ್ಟೋ ರಸ್ತೆ ಅಪಘಾತಗಳು, ಎಷ್ಟೋ ರೈಲು, ವಿಮಾನ ಭಯಂಕರ ಅಪಘಾತಗಳು, ಸುಳಿಮೇಘಗಳ ಗಾಳಿಗಳು, ಆಕಾಶಮೇಘಗಳ ಮಳೆಗಳು, ಪ್ರವಾಹಗಳು ಸೃಷ್ಟಿಸುವ

ಪ್ರಾಣನಷ್ಟ ಇವೆಲ್ಲವೂ ನರಕ ಬಾಧಗಳೇ, ಪಾಪಫಲಿತಗಳೇ, ಇವುಗಳ ಹಿಂದೆ ಕಾಣಿಸದ ಗ್ರಹ, ಭೂತಗಳ ಶಕ್ತಿಗಳು ಇರುವುದು ಯಾರಿಗೂ ತಿಳಿದಿಲ್ಲ. ಮಾಡಿಕೊಂಡ ಪಾಪಗಳಿಗೆ ಪ್ರತಿಫಲಿತವು ಎಲ್ಲಿಯೋ ನರಕದಲ್ಲಿ ಇದೆಯೆಂದು, ಪುಣ್ಯಗಳನ್ನು ಅನುಭವಿಸುವುದು ಸ್ವರ್ಗಲೋಕದಲ್ಲಿದೆಯೆಂದು ಎಲ್ಲ ಮತದವರು ಅಂದುಕೊಳ್ಳುವುದು ನಡೆಯುತ್ತಿದೆ. ಈ ವಿಧವಾಗಿ ಅಂದುಕೊಳ್ಳುವುದು ಧರ್ಮವು ಅಲ್ಲ, ಅಧರ್ಮವು ಅಲ್ಲ. ಧರ್ಮ ಅಧರ್ಮಗಳಲ್ಲದ ಕೆಲಸಗಳು ಎಷ್ಟೋ ಇವೆಯೆಂದು, ಅವುಗಳಿಂದ ಪಾಪ, ಪುಣ್ಯ ಬರಬಹುದೆಂದು ಹೇಳಿಕೊಂಡಿದ್ದೇವೆ. ದೇವರ ಜ್ಞಾನಕ್ಕೆ ವಿರುದ್ಧವಾದುದು ಯಾವುದಾದರೂ ಅದು ಮಹಾಪಾಪ ವಾಗುತ್ತದೆ. ದೇವರ ಧರ್ಮವು ಅಲ್ಲದಿರುವುದು ಅಧರ್ಮವಾದರೆ, ದೇವರ ಜ್ಞಾನಕ್ಕು, ಧರ್ಮಕ್ಕು ವಿರುದ್ಧವಾದುದು ಧರ್ಮಶತ್ರುವಾಗುತ್ತದೆ. ದೇವರು ಹೇಳಿದ ಅಧರ್ಮಗಳಿಂದ ಪುಣ್ಯಬರುತ್ತದೆಂದು ದೇವರೇ ಹೇಳಿದ್ದಾನೆ. ಧರ್ಮದಿಂದ ಮುಕ್ತಿಬಂದರೆ, ಅಧರ್ಮದಿಂದ ಪುಣ್ಯ ಬಂದರೆ, ಧರ್ಮವು ಅಲ್ಲದೆ ಅಧರ್ಮವು ಅಲ್ಲದೆ ಧರ್ಮವಿರುದ್ಧವಾದ ಕಾರ್ಯದಿಂದ (ಧರ್ಮಶತ್ರು ವಿನಿಂದ) ಬರುವ ಪಾಪ ಬಹಳ ಭಯಂಕರವಾದುದು. ಅಂತಹ ಪಾಪಗಳಿಂದ ಭೂಮಿಮೇಲೆ ಗ್ರಹಗಳು, ಭೂತಗಳು ಭಯಂಕರ ಸಂಘಟನೆಗಳನ್ನು ಸೃಷ್ಟಿಸಿ ನೂರಾರು, ಸಾವಿರಾರು, ಲಕ್ಷಗಳಷ್ಟು ಜನರನ್ನು ಹಿಂಸಿಸಿ ಸಾಯಿಸುವುದು ನಡೆಯುತ್ತದೆ. ಭಗವದ್ಗೀತೆಯಲ್ಲಿ ಹಿಂದೂಗಳಾಗಲಿ, ಬೈಬಲ್‌ನಲ್ಲಿ ಕ್ರೈಸ್ತರಾಗಲಿ, ಖುರಾನ್‌ನಲ್ಲಿ ಮುಸ್ಲಿಮ್‌ರಾಗಲಿ ಸತ್ಯವು ತಿಳಿಯದಂತೆ ದೇವರ ವಾಕ್ಯಗಳನ್ನು ತಪ್ಪಾಗಿ ಅರ್ಥ ಮಾಡಿಕೊಂಡರೆ ಅದು ದೇವರ ಧರ್ಮಕ್ಕೂ, ಜ್ಞಾನಕ್ಕೂ ವಿರುದ್ಧವಾದ ಭಾವನೆಯಾಗುತ್ತದೆ. ಶಿಕ್ಷೆಯಾಗಿ ಎಷ್ಟೋ ಭಯಂಕರ ಸಂಘಟನೆಗಳು ನಡೆಯುತ್ತವೆ. ಹಾಗ ದೇವರನ್ನು ಪ್ರಾರ್ಥಿಸಿದರೂ ಆತನು ದೇವರಿಗೆ ವಿರುದ್ಧ ಭಾವನೆಯಲ್ಲಿ ಇರುವುದರಿಂದ ದೇವರು ಸ್ವಲ್ಪವೂ ಅವರ ಮೊರೆ ಆಲಿಸುವುದಿಲ್ಲ. ದೇವರು ಹೇಳಿದ ಮೂರು ಧರ್ಮಗಳು, ನಾಲ್ಕು ಅಧರ್ಮಗಳು ಅಲ್ಲದೆ ಉಳಿದೆಲ್ಲವುಗಳಲ್ಲಿ ಎಷ್ಟೋ ವಿಧಗಳ ಕರ್ಮಗಳಿಗೆ ಕಾರಣವಾದ ಕೆಲಸಗಳಿರುವಾಗ ಅವುಗಳಲ್ಲಿ ದೇವರ ಜ್ಞಾನದ ಹತ್ತಿರ ದೈವವಿರುದ್ಧ ಕಾರ್ಯಗಳು, ಬೋಧನೆಗಳು

ಇವೆಯೆಂದು ಅವುಗಳೇ ಧರ್ಮ ಶತ್ರುಗಳೆಂದು ತಿಳಿಯಬೇಕು. ಧರ್ಮಗಳು, ಅಧರ್ಮಗಳು, ಧರ್ಮ ಶತ್ರುಗಳೆನ್ನುವ ಮೂರು ವಿಧಗಳು ಎಲ್ಲ ಮತಗಳಲ್ಲಿಯೂ ಇವೆಯೆಂದು, ಎಲ್ಲ ಮತದವರು ಅವರ ದೈವ ವಾಕ್ಯಗಳಿಗೆ ಸರಿಯಾದ ಭಾವನೆಯಲ್ಲಿ ಇದ್ದಾರೋ ಇಲ್ಲವೋ ನೋಡಿಕೊಳ್ಳುವುದು ಒಳ್ಳೆಯದೆಂದು ತಿಳಿಸುತ್ತಾ ಮುಗಿಸುತ್ತಿದ್ದೇವೆ.

***ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯಕವೊ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅವಶ್ಯಕ.***

***ಅಸತ್ಯವನ್ನು ಸಾವಿರಜನರು ಹೇಳಿದರೂ ಅದು ಸತ್ಯವು ಅಲ್ಲ,***
***ಸತ್ಯವನ್ನು ಸಾವಿರಜನರು ಅಲ್ಲಎಂದರೂ ಅದು ಅಸತ್ಯವು ಅಲ್ಲ.***

1. ತಿಳಿಯದ ಆಕಾಶ ಒಂದಾಗಿದ್ದು
   ತಿಳಿಯುವ ಸೂರ್ಯ, ಚಂದ್ರ,
   ನಕ್ಷತ್ರಗಳು ಮೂರು (ತ್ರೈತ) ಇವೆ.
2. ತಿಳಿಯದ ಕಾಲ ಒಂದಾಗಿದ್ದು
   ತಿಳಿಯುವ ದಿನ, ಮಾಸ, ಸಂವತ್ಸರ
   ಮೂರು (ತ್ರೈತ) ಇವೆ.
3. ತಿಳಿಯದ ಪರಮಾತ್ಮ ಒಂದಾಗಿದ್ದು
   ತಿಳಿಯುವ ಅಂಡಜ, ಪಿಂಡಜ,
   ಉದ್ಭಿಜ ಮೂರು (ತ್ರೈತ) ಇವೆ.

# ಇಂದೂ- ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ




## ಪ್ರಬೋಧ ಸೇವಾ ಸಮಿತಿ (P.S.S.)

(Regd.No.: 304/1991)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

***www. thraithashakam.org***

# ಧರ್ಮ–ಅಧರ್ಮ

## ಇಂದೂ (ಹಿಂದೂ) ಮತದಲ್ಲಿ ಸಿದ್ಧಾಂತಕರ್ತರು



ಅದ್ವೈತ ಸಿದ್ಧಾಂತಕರ್ತ ಆದಿ ಶಂಕರಾಚಾರ್ಯರು
Birth:509 BC - Death:477 BC (32 Years) ಕೇರಳ



ವಿಶಿಷ್ಟಾದ್ವೈತ ಸಿದ್ಧಾಂತಕರ್ತ ರಾಮಾನುಜಾಚಾರ್ಯರು
Birth : 1017 – Death : 1137 (120 years) ತಮಿಳನಾಡು



ದ್ವೈತ ಸಿದ್ಧಾಂತಕರ್ತ ಮಧ್ವಾಚಾರ್ಯರು
Birth : 1238 – Death : 1317 (79 years) ಕರ್ನಾಟಕ



ತ್ರೈತ ಸಿದ್ಧಾಂತ ಆದಿಕರ್ತ ಪ್ರಬೋಧಾನಂದ ಯೋಗೀಶ್ವರರು
Birth : 1950 ಆಂಧ್ರಪ್ರದೇಶ್ (ರಾಯಲಸೀಮ)

Author : The Only Guru of Three Religions
The Spiritual Emperor, Thraitha Theorem Originator
Sri Acharya Prabodhananda Yogeeshwarulu

www.thraithashakam.org